॥ ಶ್ರೀರಸ್ತು ॥

ಜಯಗುರುಶಂಕರ ಭಗವಾನ್.

ವೇದಾಂತ

# ಮುಕ್ತಿಮಾರ್ಗ ಪ್ರದೀಪಿಕೆ


ಮೈಸೂರು ವೇದಾಂತ ಶಿವರಾಮಶಾಸ್ತ್ರಿಗಳಿಂದ
ಸಕಲ ನಿಗಮಾಗಮ ಪುರಾಣ ಪ್ರಾಚೀನ ಗ್ರಂಥಗಳ
ಸಾರಸಂಗ್ರಹಮಾಗಿ ರಚಿಸಲ್ಪಟ್ಟು

ವೇ॥ ಸುಬ್ರಹ್ಮಣ್ಯಶಾಸ್ತ್ರಿಗಳಿಂದ
ಪರಿಶೋಧಿಸಲ್ಪಟ್ಟಿರುತ್ತೆ.



ಇದರ ಸರ್ವ ಸ್ವಾತಂತ್ರ್ಯವನ್ನು ಹೊಂದಿದ
…ರು ಸಿಟಿ ಚಿಕ್ಕಪೇಟೆ ಬುಕ್‌ಡಿಪೊ
… ಕೃಷ್ಣಯ್ಯಶೆಟ್ಟಿಯವರಿಂದ
ಪ್ರಚುರಿಸಲ್ಪಟ್ಟಿರುತ್ತೆ.

ದ್ವಿತೀಯ ಮುದ್ರಣ ೨,೦೦೦ ಪ್ರತಿಗಳು

1951




ಬೆಲೆ 1-4-0



ಶ್ರೀಃ.

ಶ್ರೀ ಸಚ್ಚಿದಾನಂದ ಶಿವಾಯ.

ಪರಬ್ರಹ್ಮಣೇನಮಃ.

# ವೇದಾಂತ
# ಮುಕ್ತಿಮಾರ್ಗ ಪ್ರದೀಪಿಕಾ



ವಿದ್ಯಾಶಂಕರಯೋಗೀಂದ್ರ ವಿದ್ಯಾರಣ್ಯ ಪದಾಂಬುಜಂ ।
ಪ್ರಣಮ್ಯಹೃದಯೇ ಕುರ್ವೇ ಮುಕ್ತಿಮಾರ್ಗಪ್ರದೀಪಿಕಾಂ ॥

ಶ್ರೀಮಚ್ಛಂಕರ ಭಗವತ್ಪಾದುಕಾದ್ಯಸ್ಮತ್ತತ್ತ್ವಬೋಧಕ ಗುರ್ವಂತಮಾದ ಸಕಲ ಸದ್ಗುರುಮಂಡಲಿಗೆ ಮನೋವಾಕ್ಕಾಯ ಕರ್ಮಂಗಳಿಂದಭಿವಂದಿಸಿ ನಿತ್ಯ ನಿರತಿಶಯಾನಂದ ಜನಕಮಾದ ಮುಕ್ತಿಪಂಥಮಂ ಕಾಣದೆ ಅನವರತ ಕೃತಕರ್ಮ ಪ್ರವಾಹ ಪ್ರಚುರಿತ ಜನನ ಮರಣಾತ್ಮಕ ಭವಜಲಧಿ ಮಧ್ಯನಿಮಗ್ನರಾಗಿ, ವಾಸನಾತ್ರಯವೆಂಬ ಸುಳಿಗಳಲ್ಲಿ ಸುತ್ತುತ್ತಾ, ವಿಷಯ ತರಂಗಪ್ರಹಾರದಿಂ ಘಾಸಿಪಡೆದು ಮಹಾಮೋಹವೆಂಬ ಬಡಬಾಗ್ನಿ ಜ್ವಾಲೆಯಿಂದ ತಪ್ತರಾಗಿ ಅಜ್ಞಾನ ಗ್ರಾಹದಂಷ್ಟ್ರಕ್ಷತದಿಂ ಮೂರ್ಛಿತರಾಗಿ,ತೀರಮಂ ಸೇರಿಸುವ ನಾಥರಿಲ್ಲದೆ ಗೋಳಿಡುತ್ತಿರುವ ನರರಿಗನಾಯಾಸದಿಂ ಮುಕ್ತಿಗೀಪಂಥಮಂ ಬಿಟ್ಟರನ್ಯಮಾರ್ಗಮಿಲ್ಲೆಂಬ ಜ್ಞಾನವು ದೃಢಪಟ್ಟು ದ್ವೈತಸಮ್ಮಂಧಮಾದ ಸಕಲ ಸಂಶಯಾರಣ್ಯದಗ್ಧಮಾಗಿ ಅನರ್ಥನಿವೃತ್ತಿದ್ವಾರಾ ನಿರತಿಶಯಾನಂದವು ಸಿದ್ಧಿಸುವಂತೆ ಸಕಲ ಶೃತಿ, ಸ್ಮೃತಿ, ಪ್ರಾಚೀನೋಕ್ತಿಗಳ ಸಾರಮಂ ಸಂಗ್ರಹಿಸಿ ಮುಕ್ತಿಮಾರ್ಗ ಪ್ರದೀಪಿಕೆಯೆಂಬ ಪೆಸರನ್ನಿಟ್ಟು ಪೇಳುವ ಗ್ರಂಥಕ್ರಮವೆಂತೆನೆ—

ಸಾಧನ ಚತುಷ್ಟಯ ಸಂಪನ್ನನಾದ ಒಬ್ಬ ಪುರುಷನು ಸಕಲ ಸಂಶಯ ನಿರಸನದ್ವಾರಾ ನಿತ್ಯಮುಕ್ತಿಪ್ರದವಾದ ವಿಹಿತ ಗುರುವಿನ ಸಮೀಪವಂ ಪೊಂದಿ ಹಸ್ತದ್ವಯ ಪಾದದ್ವಯ ಲಲಾಟವಕ್ಷಸ್ಥಲಂಗಳು ನೆಲಸೋಂಕುವಂತೆರಗಿ ನಿಟಲ ತಟಘಟಿತಾಂಜಲಿಪುಟನಾಗಿ ನಿಂತು ಎಲೈ ಸದ್ಗುರುನಾಥನೇ ಗರ್ಭದುಃಖ, ಮರಣದುಃಖ, ನರಕದುಃಖಗಳೆಂಬ ದುಃಖತ್ರಯಕ್ಕೆ ಸಿಲುಕದೆ ನಿತ್ಯಾದ್ವಿತೀಯ ಪರಮಾ

ನಂದದೊಳಗಿರುವದಕ್ಕುಪಾಯಮಂ ತೋರಿ ರಕ್ಷಿಸಬೇಕೆಂದು ಪ್ರಾರ್ಥಿಸಲಾ ಬಳಿಕ ಶಿಷ್ಯೋತ್ತಮನಿಗುಂಟಾದ ಪರಮ ವೈರಾಗ್ಯಕ್ಕೆ ಮೆಚ್ಚಿ ಗುರುವರನು ಶಿಷ್ಯನಂ ಕುರಿತು ಎಲೈ ಸಾಧೂತ್ತಮನೇ ಕೇಳು,–ನೀನಪೇಕ್ಷಿಸುವ ಸುಖವೇ ಬ್ರಹ್ಮಾನಂದ ವೆನಿಸುವುದು. ನಿರಂತರದಲ್ಲೂ ಈ ಆನಂದದೊಡನೆ ಇರುವುದಕ್ಕೆ ಮೋಕ್ಷವೆಂಮ ಪೆಸರು. ಈ ಮೋಕ್ಷವು ಜೀವ ಬ್ರಹ್ಮೈಕ್ಯಜ್ಞಾನದಿಂದಲೇ ಲಭಿಸತಕ್ಕದ್ದು. ಜ್ಞಾನಕ್ಕೆ ವ್ಯತಿರಿಕ್ತಮಾದ ನಿತ್ಯನೈಮಿತ್ತಿಕ ಪ್ರಾಯಶ್ಚಿತ್ತಾದಿ ಕರ್ಮಗಳಿಂದಲೂ, ಯಾಗ ಯೋಗ ಜಪ ತಪೋದಾನ ಯಾತ್ರಾದಿಗಳಿಂದಲೂ ಲಭಿಸುವುದಿಲ್ಲ. ಈ ವಿಷಯದಲ್ಲಿ ಪ್ರಮಾಣವಂ ಕೇಳು—

ಶಂಕರಾಚಾರ್ಯ ವಿರಚಿತ ವಿವೇಕ ಚೂಡಾಮಣಿಯಲ್ಲಿ—

**ಜಂತೂನಾಂ ನರಜನ್ಮದುರ್ಲಭಮತಃ ಪುಂಸ್ತ್ವಂತತೋ ವಿಪ್ರತಾ ।**
**ತಸ್ಮಾದ್ವೈದಿಕಧರ್ಮಮಾರ್ಗಪರತಾ ವಿದ್ವತ್ವಮಸ್ಮಾತ್ಪರಂ ॥**
**ಆತ್ಮಾನಾತ್ಮವಿವೇಚನಂ ಸ್ವಾನುಭವೋಬ್ರಹ್ಮಾತ್ಮನಾಂ ಸಂಸ್ಥಿತಿ ।**
**ರ್ಮುಕ್ತಿರ್ನೋ ಶತಕೋಟಿಜನ್ಮ ರಚಿತೈಃ ಪುಣ್ಯೈರ್ವಿನಾ ಲಭ್ಯತೇ ॥**

ಪ್ರಾಣಿಗಳಿಗೆ ನರಜನ್ಮ ಬರುವುದೇ ದುರ್ಲಭವು. ಅದರೊಳಗೂ ಪುರುಷ ನಾಗುವುದು, ಅದರಲ್ಲಿ ವಿಪ್ರನಾಗಿ ಅದರಲ್ಲೂ ವೈದಿಕಮಾರ್ಗನಿರತತ್ವವು, ಮತ್ತು ಪಾಂಡಿತ್ಯವಿದ್ದಾಗ್ಯೂ ಆತ್ಮಾನಾತ್ಮಾ ವಿವೇಕವು ಅನುಭವವು. ಬ್ರಹ್ಮಸ್ವರೂಪ ನಾಗಿರುವುದು ಮುಕ್ತಿಯು. ಇವುಗಳು ಲಭಿಸಬೇಕಾದರೆ ನೂರುಕೋಟಿ ಜನ್ಮ ಗಳ ಪುಣ್ಯ ಬೇಕು. ಆ ಪುಣ್ಯವಿಲ್ಲದಿದ್ದರೆ ಲಭಿಸುವದಿಲ್ಲ.

**ವದಂತು ಶಾಸ್ತ್ರಾಣಿ ಯಜಂತು ದೈವಾ‍ನ್ ಕುರ್ವಂತು**
**ಕರ್ಮಾಣಿ ಭಜಂತು ದೇವತಾನ್ । ಆತ್ಮೈಕಬೋಧೇನ**
**ನಾಪಿವಿಮುಕ್ತಿರ್ನಸಿಧ್ಯತಿ ಬ್ರಹ್ಮಶತಾಂತರೇಪಿ ॥**

ಶಾಸ್ತ್ರಗಳನ್ನೆಲ್ಲಾ ಓದಲಿ, ದೇವತೆಗಳನ್ನೆಲ್ಲಾ ಪೂಜಿಸಲಿ, ಕರ್ಮಗಳನ್ನೆಲ್ಲಾ ಮಾಡಲಿ, ತ್ರಿಮೂರ್ತಿಗಳನ್ನೇ ಭಜಿಸಲಿ, ಆತ್ಮೈಕ್ಯ ಜ್ಞಾನವಿಲ್ಲದಮೇಲೆ ನೂರು ಬ್ರಹ್ಮರು ಕಳದಾಗ್ಯೂ ಮುಕ್ತಿಯಿಲ್ಲ.

**ಸನ್ಯಸ್ಯಸರ್ವಕರ್ಮಾಣಿ ಭವಬಂಧವಿಮುಕ್ತಯೇ ।**
**ಯತ್ಯತಾಂ ಪಂಡಿತೈರ್ಧೀರೈರಾತ್ಮಾಭ್ಯಾಸ ಉಪಸ್ಥಿತೈಃ ॥**

ಸಕಲ ಕರ್ಮಗಳನ್ನೂ ಬಿಟ್ಟು ಜನನಮರಣ ಬಂಧ ನಿವೃತ್ತಿಗೋಸ್ಕರ ಪಂಡಿತರು ಆತ್ಮಾಭ್ಯಾಸ ಪ್ರಯತ್ನಮಾಡಬೇಕು.

**ಚಿತ್ತಸ್ಯಶುದ್ಧಯೇಕರ್ಮನತು ವಸ್ತೂವಲಬ್ದಯೇ ।**
**ವಸ್ತುಸಿದ್ಧಿರ್ವಿಚಾರೇಣುನಕಿಂಚಿತ್ಕರ್ಮಕೋಟಭಿಃ ॥**

ಚಿತ್ತಶುದ್ಧಿಗೋಸ್ಕರ ಕರ್ಮವಲ್ಲದೆ ವಸ್ತು ಸಿದ್ಧಿಗದಲ್ಲ. ವಸ್ತುಸಿದ್ಧಿಯ ವಿಚಾರದಿಂದಾಗುವುದೇ ವಿನಹ ಕೋಟಿ ಕರ್ಮಗಳನ್ನು ಮಾಡಿದರೂ ಆಗುವದಿಲ್ಲ.

**ಅರ್ಥಸ್ಯ ನಿಶ್ಚಯೋದೃಷ್ಟೋ ವಿಚಾರೇಣ ಹಿತೋಕ್ತಿತಃ ।**
**ನಸ್ನಾನೇನ ನದಾನೇನ ಪಾಣಾಯಾಮುಶತೇನವಾ ॥**

ಒಂದು ವಸ್ತುವಿನ ಸ್ವರೂಪಜ್ಞಾನವಾಗಬೇಕಾದರೆ ಆ ವಸ್ತುವಿನ ವಿಚಾರ ದಿಂದ ಆಗಬೇಕು. ಅದನ್ನು ತಿಳಿದ ಆಪ್ತನ ವಚನದಿಂದಲಾದರೂ ತಿಳಿಯಬೇಕು. ಇದನ್ನು ಬಿಟ್ಟು ಸ್ನಾನ ದಾನ ಪ್ರಾಣಾಯಾಮ ಶತದಿಂದಲೂ ತಿಳಿಯಲಾಗದು.

**ನಯೋಗೇನನ ಸಾಂಖ್ಯೇ ನಕರ್ಮಣಾನೋ ನವಿದ್ಯಯಾ ।**
**ಬ್ರಹ್ಮಾತ್ಮೈಕತ್ವಬೋಧೇನ ಮೋಕ್ಷಸ್ಸಿಧ್ಯತಿನಾನ್ಯಥಾ ॥**

ಯೋಗದಿಂದಲೂ, ಸಾಂಖ್ಯದಿಂದಲೂ, ಕರ್ಮದಿಂದಲೂ, ವಿದ್ಯಗಳಿಂದಲೂ, ಮುಕ್ತಿ ಸಿದ್ಧಿಸದು. ಜೀವಬ್ರಹ್ಮೈಕ್ಯಜ್ಞಾನದಿಂದಲೇ ಸಿದ್ಧಿಸಬೇಕು. ಅನ್ಯಥಾ ಸಿದ್ಧಿಸದು.

ಇವರಂತೆ ಶಂಕರಾಚಾರ್ಯ ವಿರಚಿತ ಮಹಾವಾಕ್ಯ ದರ್ಪಣದಲ್ಲಿ—

**ಸಂಸಾರಬಂಧೋಯಮುಬೋಧಮೂಲಃ ಕರ್ಮಪ್ರವೃದ್ಧೋ ॥**
**ಬಹುದುಃಖಹೇತುಃ । ನಕರ್ಮಕೋಟ್ಯಾಸ್ಯವಿಮುಕ್ತಿರಿ ।**
**ಷ್ಯತೆ ತತ್ವಾವಬೋಧೇನ ವಿನಾಮುಮುಕ್ಷೋಃ ॥**

ಸಂಸಾರವೆಂಬ ಈ ಬಂಧನವು ಅಜ್ಞಾನವೇ ಮೂಲವಾಗುಳ್ಳದ್ದು, ಕರ್ಮ ದಿಂದ ವೃದ್ಧಿಯಾಗತಕ್ಕದು. ಬಹು ದುಃಖಕ್ಕೆ ಕಾರಣವಾದದ್ದು. ಇದರ ವಿಮೋಚನೆಗೆ ತತ್ವಾವಬೋಧೆಯಂ ಬಿಟ್ಟರೆ ಕೋಟಿಕರ್ಮಗಳನ್ನು ಮಾಡಿದರೂ ಭವಬಂಧವಳಿಯದು.

**ತತ್ವಾವಬೋಧಸ್ತು ವಿಚಾರ್ಯಮಾಣೇಸಮ್ಯಕ್ಪದಾರ್ಥೆ ।**
**ಸಮುದೇತಿಪುಂಸಃ । ಶೃತಿಸ್ಮೃತಿನ್ಯಾಯಬಲೇನ**
**ಬುಧ್ಯಾನಸ್ನಾನಮಂತ್ರಾರ್ಚ್ಚನಕೀರ್ತನಾದ್ಯೈಃ ॥**

ಈ ತತ್ವಜ್ಞಾನವಾದರೊ ಚನ್ನಾಗಿ ಶೃತಿ ಸ್ಮೃತಿ ನ್ಯಾಯ ಬುದ್ಧಿ ಇವುಗ ಳಿಂದ ವಸ್ತುವಿಮರ್ಶೆ ಮಾಡಿದರೆ ಉಂಟಾಗುತ್ತೆ. ಇದನ್ನು ಬಿಟ್ಟು ಸ್ನಾನ ಮಂತ್ರ ಅರ್ಚನೆ ಸ್ತೋತ್ರ ಇತ್ಯಾದಿಗಳಿಂದ ತತ್ವಜ್ಞಾನವಾಗಲಾರದು.

**ನಹಿಸ್ನಾನಶತೇನಾಪಿ ರಜ್ಜುಸರ್ಪಭ್ರಮೋನ್ನೃಣಾಂ ।**
**ಭಯಕಂಪಪ್ರದೋಯಾತಿ ವಿನಾವಸ್ತ್ವವಮರ್ಶನಾತ್ ॥**

ಭಯಕಂಪಪ್ರದವಾದ ರುಜ್ಜುವಿನಲ್ಲಿ ತೋರಿದ ಸರ್ಪಭ್ರಾಂತಿಯು ಆ ರಜ್ಜುವನ್ನು ವಿಮರ್ಶಮಾಡೋಣವರಿಂದಲೇ ಅಳಿಯಬೇಕಾಗಿದೆ. ಅದು ಬಿಟ್ಟು ನೂರು ಸ್ನಾನಗಳನ್ನು ಮಾಡಿದರೂ ಆ ಸರ್ಪಭ್ರಾಂತಿ ನಾಶವಾಗದು.

**ಸಂಸಾರವರ್ಧಕಂ ಕರ್ಮತನ್ನಿವೃತ್ತ್ಯೈನಕಲ್ಪತೆ ।**
**ನಹಿಪಂಕಸ್ಯ ಪಂಕೇನ ನಿವೃತ್ತಿರವಲೋಕತೆ ॥**

ಭವಬಂಧನವನ್ನು ವೃದ್ಧಿಪಡಿಸುವ ಈ ಕರ್ಮದಿಂದ ಭವಬಂಧನ ನಿವೃತ್ತಿಯಾಗಲಾರದು. ಕೆಸರಿನಿಂದ ಉಂಟಾದ ಕೊಳೆಯು ಕೆಸರಿನಿಂದಲೇ ತೊಳೆದರೆ ಹೋಗತಕ್ಕದ್ದು ಎಲ್ಲೂ ಕಾಣಲಿಲ್ಲ.

**ಅಪಿಕೋಟ್ಯಜ ಕಲ್ಪಾನಾಂ ಕರ್ಮಣಾ ಮುಕ್ತಿರಿಷ್ಯತೇ ।**
**ನಾಂತರಾಬ್ರಹ್ಮವಿಜ್ಞಾನಂ ಪ್ರಸಾದಾದಂತರಾತ್ಮನಃ ॥**

ಕೋಟಿಬ್ರಹ್ಮಕಲ್ಪಗಳಿಗೂ ಕರ್ಮದಿಂದ ಮುಕ್ತಿಯಾಗುವುದಿಲ್ಲ. ಅಂತರಾತ್ಮನ ಪ್ರಸಾದದಿಂದುಂಟಾದ ಬ್ರಹ್ಮಜ್ಞಾನದಿಂದಲೇ ಆಗಬೇಕು.

ಮತ್ತು ಶಿವಗೀತೆಯಲ್ಲಿ—

**ನಕರ್ಮಣಾಮನುಷ್ಠಾನೈರ್ನದಾನೈಸ್ತಪಸಾಪಿವಾ ।**
**ಕೈವಲ್ಯಂ ಲಭತೇ ಮರ್ತ್ಯಃ ಕಿಂತುಜ್ಞಾನೇನಕೇವಲಂ ॥**

ಕರ್ಮಾನುಷ್ಠಾನದಿಂದಲೂ, ದಾನದಿಂದಲೂ, ತಪಸ್ಸಿನಿಂದಲೂ ಮನುಷ್ಯನು ಮುಕ್ತಿಯಂ ಹೊಂದನು. ಇನ್ಯಾತರಿಂದ ಅಂದರೆ – ಕೇವಲ ಜ್ಞಾನದಿಂದಲೇ ಮುಕ್ತಿ.

ಕೈವಲ್ಯೋಪನಿಷತ್ತಿನಲ್ಲಿ—

**ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ ಕರ್ಮಣಾನಪ್ರಜಯಾಧನೇನ ।**

ಬ್ರಹ್ಮವಿದ್ಯವನ್ನು ಶ್ರದ್ಧಾ ಭಕ್ತಿ ಧ್ಯಾನ ಇವುಗಳ ಯೋಗದಿಂದ ತಿಳಿಯತಕ್ಕವನಾಗು. ಇದನ್ನು ಬಿಟ್ಟು ಕರ್ಮದಿಂದಲೂ, ಪುತ್ರಸಂತಾನದಿಂದಲೂ, ಧನದಿಂದಲೂ ತಿಳಿಯುವುದಿಲ್ಲ. ಮತ್ತು ಪುರುಷಸೂಕ್ತೆ.

**ತಮೇವಂ ವಿದ್ವಾನಮೃತ ಇಹಭವತಿ । ನಾನ್ಯಃ ಪಂಥಾವಿದ್ಯತೇಯನಾಯ ॥**

ಈ ರೀತಿ ಆ ಬ್ರಹ್ಮವನ್ನು ತಿಳಿದವನಾಗಿ ಮುಕ್ತಿಯಂ ಪಡೆಯುತ್ತಾನೆ. ಈ ತಿಳಿಯುವ ಮಾರ್ಗವಂ ಬಿಟ್ಟರೆ ಮುಕ್ತಿಗೆ ಬೇರೆ ಮಾರ್ಗವಿಲ್ಲ. ಈ ರೀತಿ ಕರ್ಮದಿಂದ

ಮುಕ್ತಿಯಿಲ್ಲವೆಂಬ ವಿಷಯದಲ್ಲಿ ಶೃತಿ ಸ್ಮೃತಿ ಪುರಾಣಗಳಲ್ಲಿ ಪರಸಹಸ್ರ ಪ್ರಮಾಣಗಳಿವೆ. ಆದ್ದರಿಂದ ಮೋಕ್ಷವಂ ಬಯಸುವನು ಎಲ್ಲಾ ಕಾರ್ಯವಂಬಿಟ್ಟು ಬ್ರಹ್ಮವಿಚಾರವಲ್ಲೇ ಇರಬೇಕು. ಯಾಗ, ಯೋಗ, ತಪಸ್ಸ್ವಾಧ್ಯಾಯ, ಯಜ್ಞ, ದಾನ, ವ್ರತ, ಪೂಜಾದಿಗಳನ್ನು ಅನೇಕ ಕೋಟಿ ಮಾಡಿದಾಗ್ಯೂ ಈ ಜ್ಞಾನಕ್ಕೆ ಸಮಾನವಾಗಲಾರದು. ಲೋಕದಲ್ಲಿ ಜ್ಞಾನಿಗಿಂತಲೂ ಅಧಿಕನಾದವನು ಯಾರೂ ಇಲ್ಲ. ಈ ವಿಷಯದಲ್ಲಿ ಪ್ರಮಾಣ.

ಭಗವದ್ಗೀತೆ ನಾಲ್ಕನೇ ಅಧ್ಯಾಯದಲ್ಲಿ—

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೆ ॥**

ದ್ರವ್ಯಯಜ್ಞ, ತಪೋಯಜ್ಞ, ಜ್ಞಾನಯಜ್ಞ ಎಂಬದಾಗಿ ಯಜ್ಞಗಳು ಅನೇಕ ವಿಧವಾಗಿರುವವು. ಇದರೊಳಗೆ ಜ್ಞಾನಯಜ್ಞವೇ ಶ್ರೇಷ್ಠವಾದದ್ದು, ಎಲೈ ಪಾರ್ಥನೇ ಎಲ್ಲವೂ ಸಕಲ ಕರ್ಮಗಳೂ ಕೂಡ ಜ್ಞಾನದೊಳಗೈಕ್ಯ.

**ಅಪಿಚೇದಪಿ ಪಾಪೇಭ್ಯಸ್ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥**

ಲೋಕದಲ್ಲಿ ಮಹಾಪಾಪಗಳನ್ನು ಮಾಡಿರತಕ್ಕ ಪಾಪಿಗಳೊಳಗಾಗಿ ಅತ್ಯಂತ ಪಾಪಿಷ್ಠನಾಗಿರತಕ್ಕವನು ತನ್ನ ಸಮಸ್ತ ಪಾಪಗಳನ್ನೂ ಜ್ಞಾನವೆಂಬ ತೆಪ್ಪದಿಂದ ದಾಟುತ್ತಾನೆ.

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥**

ಪ್ರಜ್ವಲಿಸುತ್ತಿರುವ ಅಗ್ನಿಯು ಹ್ಯಾಗೆ ಸೌದೆಗಳ ರಾಶಿಗಳನ್ನೆಲ್ಲಾ ಬೂದಿಯಾಗಿ ಮಾಡುತ್ತೋ, ಹಾಗೆ ಜ್ಞಾನವೆಂಬ ಅಗ್ನಿಯು ಸಂಚಿತಾಗಾಮಿ ಸಕಲ ಕರ್ಮಗಳನ್ನು ಸಟ್ಟು ಬೂದಿಮಾಡುತ್ತೆ.

**(ನಹಿಜ್ಞಾನೇನಸದೃಶಂ ಪವಿತ್ರಮಿಹ ವಿದ್ಯತೆ.)**

ಜ್ಞಾನಕ್ಕೆ ಸಮಾನವಾದ ಪವಿತ್ರವಸ್ತುವೇ ಇಲ್ಲ.

ಪಂಚಮಾಧ್ಯಾಯದಲ್ಲಿ—

**ತದ್ಬುದ್ಧಯಸ್ತದಾತ್ಮಾನ ಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯ ಪುನರಾವೃತ್ತಿಂ ಜ್ಞಾನನಿರ್ಧೂತ ಕಲ್ಮಷಾಃ ॥**

ಜ್ಞಾನದಿಂದ ಸಕಲ ಪಾಪಗಳನ್ನು ಕಳಕೊಂಡಿರುವರು ಆ ಬ್ರಹ್ಮನಲ್ಲಿಯೇ ಬುದ್ಧಿಯುಳ್ಳವರಾಗಿಯೂ, ಆ ಬ್ರಹ್ಮವೇ ಆತ್ಮಸ್ವರೂಪ ಉಳ್ಳವರಾಗಿಯೂ,

ಆ ಬ್ರಹ್ಮದಲ್ಲೇ ಅಭಿನಿವೇಶನವುಳ್ಳವರಾಗಿಯೂ, ಪುನರಾವೃತ್ತಿಯಿಲ್ಲದ ಮುಕ್ತಿಯಂ ಪಡೆಯುವರು.

೬ನೇ ಅಧ್ಯಾಯದಲ್ಲಿ—

**ಯೋಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೆ ನ ಪ್ರಣಶ್ಯತಿ ॥**

ಯಾವನು ಎಲ್ಲಾ ಕಡೆಯಲ್ಲೂ ನನ್ನನ್ನು, ನನ್ನಲ್ಲಿ ಸಕಲವನ್ನು ನೋಡುತ್ತಾನೋ ಅವನಿಗೆ ನಾನು ಮರೆಯಾಗುವದಿಲ್ಲ; ನನಿಗೆ ಅವನು ಮರೆಯಾಗುವದಿಲ್ಲ.

**ಸರ್ವಭೂತಸ್ಥಿತಂ ಯೋಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾವರ್ತಮಾನೋಪಿ ಸ ಯೋಗೀಮಯಿವರ್ತತೇ ॥**

ಸರ್ವವ್ಯಾಪಕನಾದ ನನ್ನನ್ನು ಯಾವನು ಅಖಂಡಭಾವದಿಂದ ನೋಡಿ ಭಜಿಸುತ್ತಾನೋ ಅವನು ವ್ಯವಹಾರದಲ್ಲಿದ್ದಾಗ್ಯೂ ನನ್ನಲ್ಲೇ ಇರುವನು.

ಸಪ್ತಮಾಧ್ಯಾಯದಲ್ಲಿ—

**ಚತುರ್ವಿಧಾ ಭಜಂತೇ ಮಾಂ ಜನಾಸ್ಸುಕೃತಿನೋಽರ್ಜುನ ।**
**ಆರ್ತೋರ್ಜಿಜ್ಞಾಸುರರ್ಥಾರ್ಥಿ ಜ್ಞಾನೀ ಚ ಭರತರ್ಷಭ ॥**

ಎಲೈ ಅರ್ಜುನನೇ ರೋಗಿಯೂ, ಜಿಜ್ಞಾಸುವೂ, ಧನಾಪೇಕ್ಷೆಯುಳ್ಳವನೂ, ಜ್ಞಾನಿಯೂ ಈ ನಾಲ್ಕು ವಿಧವಾದ ಜನಗಳೂ ನನ್ನಂ ಭಜಿಸುತ್ತಾರೆ.

**ತೇಷಾಂ ಜ್ಞಾನೀ ನಿತ್ಯಯುಕ್ತಃ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋಹಿ ಜ್ಞಾನಿನೋತ್ಯರ್ಥ ಮಹಂ ಸ ಚ ಮಮಪ್ರಿಯಃ ।**
**ಉದಾರಸ್ಸರ್ವ ಏವೈತೇ ಜ್ಞಾನೀತ್ವಾತ್ಮೈವಮೇಮತಂ ॥**

ಈ ನಾಲ್ಕು ಜನಗಳಲ್ಲಿ ನಿತ್ಯಜ್ಞಾನ ಸಂಪನ್ನನಾಗಿಯೂ ಮುಖ್ಯ ಭಕ್ತಿಯುಳ್ಳಜ್ಞಾನಿಯೇ ಶ್ರೇಷ್ಠನಾಗಿ ನಿಲ್ಲುವನು. ಜ್ಞಾನಿಗೆ ನಾನು ಅತ್ಯಂತ ಪ್ರಿಯನು, ನನಿಗೆ ಜ್ಞಾನಿಯು ಪರಮಪ್ರಿಯನು, ಈ ನಾಲ್ಕು ಜನರೂ ಶ್ರೇಷ್ಠರೇನೆ. ಇದರಲ್ಲಿ ಜ್ಞಾನಿ ಮಾತ್ರ ನಾನೆ ಆಗಿರುತ್ತೇನೆ, ಅಂದರೆ ಜ್ಞಾನಿಗೂ ನನಿಗೂ ಭೇದವೇ ಇಲ್ಲವೆಂಬ ಭಾವ.

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।**
**ವಾಸುದೇವಸ್ಸರ್ವಮಿತಿ ಸ ಮಹಾತ್ಮಾ ಸು ದುರ್ಲಭ ॥**

ಯಾವನು ಬಹುಜನ್ಮಗಳನಂತರ ಸರ್ವವೂ ಬ್ರಹ್ಮವೇ ಎಂಬ ಜ್ಞಾನವುಳ್ಳವನಾಗಿ ನನ್ನನ್ನು ಹೊಂದುತ್ತಾನೋ ಆ ಮಹಾತ್ಮನು ಲೋಕದಲ್ಲಿ ದುರ್ಲಭನು.

೧೩ನೇ ಅಧ್ಯಾಯದಲ್ಲಿ—

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ವಜ್ಞಾನಾರ್ಥದರ್ಶನಂ ।**
**ಏತತ್ ಜ್ಞಾನಮಿತಿಪ್ರೋಕ್ತಮಜ್ಞಾನಂಯದತೋನ್ಯಥಾ ॥**

ಆತ್ಮತತ್ವಜ್ಞಾನದಲ್ಲಿ ನಿತ್ಯತ್ವವೂ, ಮೋಕ್ಷಜ್ಞಾನದಲ್ಲಿ ಪ್ರಯೋಜನ ದೃಷ್ಟಿಯೂ ಯಾವುದುಂಟೋ ಅದೇ ಜ್ಞಾನವೆನಿಸುವುದು. ಇದಕ್ಕೆ ವ್ಯತಿರಿಕ್ತ ವಾದದ್ದೇ ಅಜ್ಞಾನವೆನಿಸುವುದು.

೧೮ನೇ ಅಧ್ಯಾಯದಲ್ಲಿ—

**ಸರ್ವಭೂತೇಷುಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತತ್ ಜ್ಞಾನಂ ಸಾತ್ವಿಕಂವಿದುಃ ॥**

ಯಾವ ಜ್ಞಾನದಿಂದ ಭಿನ್ನಭಿನ್ನವಾಗಿ ಕಾಣುತ್ತಿರುವ ಭೂತಂಗಳಲ್ಲಿ ಅಖಂಡವಾಗಿಯೂ ನಾಶರಹಿತವಾಗಿಯೂ ಇರುವ ಪರಮಾತ್ಮನ ಸ್ವರೂಪವಂ ನೋಡುತ್ತಾನೋ ಆ ಜ್ಞಾನವು ಸಾತ್ವೀಕವೆಂದು ತಿಳಿದಿದ್ದಾರೆ.

**ಪೃತಕ್ತ್ವೇನತುಯಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತತ್ ಜ್ಞಾನಂ ವಿದ್ಧಿರಾಜಸಂ ॥**

ಯಾವ ಜ್ಞಾನವು ಸಮಸ್ತ ಭೂತಗಳಲ್ಲಿಯೂ ಭೇದಭಾವನೆಯಿಂದ ಭಿನ್ನ ಪ್ರಕಾರವಾದವುಗಳನ್ನಾಗಿಯೂ ನಾನಾವಿಧವಾದವುಗಳನ್ನಾಗಿಯೂ ತಿಳಿಯುತ್ತೋ ಆ ಜ್ಞಾನವು ರಾಜಸವೆಂದು ತಿಳಿ.

**ಯತ್ತುಕೃತ್ಸ್ನವದೇಕಸ್ಮಿನ್ ಕಾರ್ಯೇಸಕ್ತಮಹೈತುಕಂ ।**
**ಅತತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಂ ॥**

ಯಾವ ಜ್ಞಾನವು ಮುಖ್ಯವಾಗಿ ಶಿಲಾದಿ ಪ್ರತಿಮೆಗಳಲ್ಲಿ ಕೂಡಿದ್ದಾಗಿ, ಇದೇದೇವರು ಇದಕ್ಕಿಂತಲೂ ಬೇರೆ ಇಲ್ಲವೆಂಬುದಾಗಿದೆಯೋ ನಿರ್ಬೀಜವಾಗಿಯೂ ಅಲ್ಪಫಲಪ್ರದವಾಗಿಯೂ ಯಥಾರ್ಥವಲ್ಲದ್ದಾಗಿಯೂ ಇರುವ ಆ ಜ್ಞಾನವೇ ತಾಮಸವೆಂದು ಹೇಳಲ್ಪಡುತ್ತೆ. ಈ ರೀತಿಯಾಗಿ ಅಖಂಡಜ್ಞಾನವೇ ಸರ್ವೋತ್ತಮವು. ಈ ಅಖಂಡ ಜ್ಞಾನವುಳ್ಳವನೇ ಶ್ರೇಷ್ಠನೆಂದು ಅರ್ಜುನನಿಗೆ ಶ್ರೀಕೃಷ್ಣನು ಹೇಳಿದ್ದಾನೆ.

ಶಿವಗೀತೆಯಲ್ಲಿ ೬ನೇ ಅಧ್ಯಾಯದಲ್ಲಿ—

**ಏವಂ ಮಾಂ ತತ್ವತೋವೇತ್ತಿ ಯಸ್ತುರಾಮ ಮಹಾಮತೇ ।**
**ಸಏವನಾನ್ಯೋ ಲೋಕೇಷು ಕೈವಲ್ಯಂ ಫಲಮಶ್ನುತೆ ॥**

ಶಿವನು ರಾಮನಿಗೆ ಹೇಳುತ್ತಾನೆ. ಎಲೈ ರಾಮನೇ ಯಾವನು ಈ ರೀತಿ ಯಾಗಿ ನನ್ನನ್ನು ತತ್ವಜ್ಞಾನದಿಂದ ತಿಳಿಯುತ್ತಾನೋ ಲೋಕದಲ್ಲಿ ಅವನೇ ಮುಕ್ತಿ ಫಲವನ್ನು ಅನುಭವಿಸತಕ್ಕವನು ; ಇತರನು ಮುಕ್ತನಾಗುವುದಿಲ್ಲ.

ದಶಮಾಧ್ಯಾಯದಲ್ಲಿ—

**ಯಸ್ಯ ಸರ್ವಾಣಿಭೂತಾನಿಹ್ಯಾತ್ಮೈವಾ ಭೂರ್ವಿಜಾನತಃ ।**
**ಕೋಮೋಹಸ್ತತ್ರಕಶ್ಶೋಕ ಏಕತ್ವಮನು ಪಶ್ಯತಃ ॥**

ಯಾವನಿಗೆ ಸಕಲ ಪ್ರಪಂಚವೂ ಆತ್ಮಸ್ವರೂಪವೇ ಆಗಿದೆಯೋ, ಯಾವನು ಎಲ್ಲವನ್ನೂ ಆತ್ಮಸ್ವರೂಪವನ್ನಾಗಿಯೇ ತಿಳಿಯುತ್ತಾನೋ ಅವನಿಗೆ ಮೋಹ ವೆಲ್ಲಿಯದು ದುಃಖವೆಲ್ಲಿಯದು.

**ಅವ್ಯಾಕೃತೆ ಬ್ರಹ್ಮರೂಪೋ ಜಗತ್ಕರ್ತಾ ಮಹೇಶ್ವರಃ ।**
**ನಾನಾವಿದ್ಯಾಸಮಾಯುಕ್ತೋ ಜೀವತ್ವೇನವಸಾಮ್ಯಹಂ ॥**

ಶಿವನು ಹೇಳುತ್ತಾನೆ—ಅವ್ಯಾಕೃತ ಬ್ರಹ್ಮ ಸ್ವರೂಪನಾಗಿಯೂ ಜಗತ್ಕಾರಣನಾಗಿಯೂ ಇರುವ ಈಶ್ವರನೇ ನಾನು. ನಾನಾವಿಧವಾದ ಅವಿದ್ಯೆಯೊಡನೆ ಕೂಡಿ ನಾನೇ ಜೀವಸ್ವರೂಪನಾಗಿದ್ದೇನೆ.

೧೧ನೇ ಅಧ್ಯಾಯದಲ್ಲಿ—

**ಶುದ್ಧಬ್ರಹ್ಮರತೋಯಸ್ತು ಸನಾಯಾತ್ಯೇವಕುತ್ರಚಿತ್ ॥**
**ತಸ್ಯ ಪ್ರಾಣಾವಿಲೀಯಂತೆ ಜಲೇ ಸೈಂಧವಪಿಂಡವತ್ ॥**
**ಸ್ವಪ್ನಸೃಷ್ಟಿರ್ಯಥಾದೃಷ್ಟಾ ಪ್ರಬುದ್ಧಸನ್ವಿಲೀಯತೇ ।**
**ಬ್ರಹ್ಮಜ್ಞಾನವತಸ್ತದ್ವತ್ ವಿಲೀಯಂತೇತಥೈವತೇ ॥**

ಶುದ್ಧಬ್ರಹ್ಮವಿಚಾರದಲ್ಲಿರುವ ಮನುಷ್ಯನು ಪುನಶ್ಚ ಹುಟ್ಟುವುದೇಯಿಲ್ಲ. ನೀರಿನಲ್ಲಿ ಕಲಸಿದ ಉಪ್ಪಿನಂತೆ ಅವನ ಪ್ರಾಣಗಳು ಅಲ್ಲೇ ವಿಲೀನವಾಗುವವು. ಸ್ವಪ್ನದಲ್ಲಿ ನೋಡಿದ ವಸ್ತುವು ಜಾಗ್ರತ್ಕಾಲದಲ್ಲಿ ಹ್ಯಾಗೆ ಲಯವಾಗುವುದೋ ಬ್ರಹ್ಮಜ್ಞಾನಿಗೆ ಅದರಂತೆ ಪ್ರಾಣಗಳು ಲಯವಾಗುವವು.

೧೩ನೇ ಅಧ್ಯಾಯದಲ್ಲಿ—

**ಯಸ್ತುಶಾತ್ಯಾದಿಯುಕ್ತಸ್ಸನ್ ಮಾಮಾತ್ಮತ್ವೇನ ಪಶ್ಯತಿ ।**
**ಸಜಾಯತೇ ಪರಂಜ್ಯೋತಿರದ್ವೈತಂ ಬ್ರಹ್ಮಕೇವಲಂ ॥**

ಎಲೈ ರಾಮನೇ ಯಾವನು ಶಾಂತ್ಯಾದಿ ಗುಣಗಳಿಂದ ಕೂಡಿದವನಾಗಿ ನನ್ನನ್ನು ತನ್ನಂತೇ ಭಾವಿಸುತ್ತಾನೋ ಅವನು ಅದ್ವೈತಪರಂಜ್ಯೋತಿ ಬ್ರಹ್ಮ ಸ್ವರೂಪನೇ ಆಗುತ್ತಾನೆ.

**ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿಚಾತ್ಮನಿ ।**
**ಸಂಪಶ್ಯನ್ ಸಂಚರತ್ವೇಷ ಜೀವನ್ಮುಕ್ತೋಭಿಧೀಯತೇ ॥**

**ಮೋಕ್ಷಸ್ಯ ನಹಿವಾಸೋಸ್ತಿ ನಗ್ರಾಮಾಂತರಮೇವವಾ ।**
**ಅಜ್ಞಾನಹೃದಯಗ್ರಂಥಿನಾಶೊ ಮೋಕ್ಷ ಇತಿ ಸ್ಮೃತಃ ॥**

ತನ್ನನ್ನು ಸಮಸ್ತ ಭೂತಗಳಲ್ಲೂ, ಸಮಸ್ತ ಭೂತಗಳನ್ನು ತನ್ನಲ್ಲಿಯೂ ಅಂದರೆ ನಾನೇ ಜಗವು ಜಗವೇ ನಾನು ಎಂಬ ಅಖಂಡ ಭಾವದಿಂದ ಯಾವನು ನೋಡುತ್ತ ಸಂಚರಿಸುವನೋ ಅವನು ಜೀವನ್ಮುಕ್ತನು. ಮೋಕ್ಷಕ್ಕೆ ಒಂದು ನಿವಾಸಸ್ಥಾನವಿಲ್ಲ. ಗ್ರಾಮಾಂತರವಲ್ಲಿ ಮೋಕ್ಷವಿಲ್ಲ. ಆ ಜ್ಞಾನವೆಂಬ ಗಂಟಿನ ನಾಶವೇ ಮೋಕ್ಷವೆನಿಸುವುದು.

**ವೃಕ್ಷಾಗ್ರಾಚ್ಚ್ಯುತಪಾದೋಯಃ ಸತದೈವಪತತ್ಯಧಃ ।**
**ತದ್ವತ್ ಜ್ಞಾನವತೋ ಮುಕ್ತಿರ್ಜಾಯತೇ ನಿಶ್ಚಿತಾಪಿಹಿ ॥**

ಮರವಮೇಲಕ್ಕೆ ಹತ್ತಿರತಕ್ಕವನು ಕಾಲುಜಾರಿದಕೂಡಲೆ ತಕ್ಷಣವೇ ಕೆಳಗೆ ಹೇಗೆ ಬೀಳುತ್ತಾನೆಯೋ ಅದರಂತೆ ಆತ್ಮಜ್ಞಾನಿಗೆ ಸಮ್ಯಜ್ಞಾನವುಂಟಾದಕೂಡಲೆ ಮುಕ್ತಿಯು ಸಿದ್ಧಿಸುವುದು. ಅಂದರೆ—ಅವನು ಮುಕ್ತಿಯನ್ನು ಬಯಸದಿದ್ದರೂ ಮುಕ್ತನಾಗುವನೆಂದು ಭಾವವು.

ಹದಿನಾರನೇ ಅಧ್ಯಾಯದಲ್ಲಿ—

**ಸಂಸಾರಾನ್ಮುಚ್ಯತೇಜಂತುಃ ಶಿವತಾದಾತ್ಮ್ಯ ಭಾವನಾತ್ ।**
**ತಥಾ ದಾನಂ ತಪೋ ವೇದಾಧ್ಯಯನಂವಾನ್ಯಕರ್ಮವಾ ॥**
**ಸಹಸ್ರಾಂಶಂತು ನಾರ್ಹಂ ಸರ್ವಥಾ ಧ್ಯಾನಕರ್ಮಣಃ ।**
**ಜಾತಿಮಾಶ್ರಮಮಂಗಾನಿ ದೇಶ-ಕಾಲಮಥಾಪಿವಾ ॥**
**ಆಸನಾದೀನಿ ಕರ್ಮಾಣಿ ಧ್ಯಾನಂ ನಾಪೇಕ್ಷತೇಕ್ವಚಿತ್ ।**
**ಗಚ್ಛನ್ ತಿಷ್ಠನ್ ಚರನ್ ವಾಪಿ ಶಯಾನೋವಾನ್ಯಕರ್ಮಣಿ ॥**
**(ಪಾತಕೇನಾಪಿವಾಯುಕ್ತೋ ಧ್ಯಾನಾದೇವವಿಮುಚ್ಯತೇ । )**

ಎಲೈ ರಾಮನೇ ! ಮನುಷ್ಯನು, ನಾನೇ ಶಿವನೆಂಬ ಶಿವಜೀವೈಕ್ಯ ಭಾವನೆಯಿಂದ ಮುಕ್ತನಾಗುವನು. ದಾನ, ತಪಸ್ಸು, ವೇದ, ಪಾರಾಯಣ ಇತ್ಯಾದಿ ಕರ್ಮಗಳೆಲ್ಲವೂ ಶಿವಜೀವೈಕ್ಯಧ್ಯಾನದ ಸಹಸ್ರ ಭಾಗದಲ್ಲಿ ಒಂದು ಭಾಗಕ್ಕೆ ಸರ್ವದಾ ಅಂದರೆ—ಎಷ್ಟು ಮಾತ್ರವೂ ಸರಿಬರಲಾರದು. ಜಾತಿ, ವರ್ಣಾಶ್ರಮ, ಅಂಗ, ದೇಶ, ಕಾಲ, ಆಸನಾದಿ ಕರ್ಮಗಳನ್ನು ಈ ಶಿವಜೀವೈಕ್ಯಧ್ಯಾನವು ಅಪೇಕ್ಷಿಸುವುದಿಲ್ಲ. ಅಂದರೆ—ಜೀವಬ್ರಹ್ಮೈಕ್ಯ ವಿಚಾರವನ್ನು ಮಾಡುವ ವಿಷಯದಲ್ಲಿ ಇಂಥ ಜಾತಿಯವನು, ಇಂಥ ಕಾಲ, ಇಂಥ ದೇಶ, ಇಂಥಾ ಆಸನ, ಇಂಥ ಶಾಸ್ತ್ರ ಇತ್ಯಾದಿ ನಿಯಮಗಳೇನು ಇಲ್ಲವು. ನಡೆಯುತ್ತಾ ನಿಂತು ಓಡಾಡುತ್ತಾ ಮಲ

ಗಿದ್ದರೂ ಅಥವಾ ಇತರ ಕರ್ಮದಲ್ಲಿದ್ದರೂ, ಮಹಾ ಪಾಪಗಳಿಂದ ಕೂಡಿದವನಾಗಿದ್ದರೂ ಈ ಜೀವಬ್ರಹ್ಮೈಕ್ಯಧ್ಯಾನದಿಂದಲೇ ಮುಕ್ತನಾಗುತ್ತಾನೆ.

ವಿವೇಕಚೂಡಾಮಣಿಯಲ್ಲಿ—

**ಅಜ್ಞಾನ ಯೋಗಾತ್ಪರಮಾತ್ಮನಸ್ತವಹ್ಯನಾತ್ಮಬಂಧಸ್ತತ**
**ಏವ ಸಂಸೃತಿಃ। ತಯೋರ್ವಿವೇಕೋದಿತಬೋಧವಹ್ನಿ**
**ರಜ್ಞಾನ ಕಾರ್ಯಂ ಪ್ರದಹೇತ್ಸಮಸ್ತಂ ॥**

ಎಲೈ ಶಿಷ್ಯನೇ! ಪರಮಾತ್ಮಸ್ವರೂಪನಾಗಿರುವನಿಗೆ ಅಜ್ಞಾನಯೋಗದಿಂದ ಅನಾತ್ಮಗಳಾದ ಶರೀರಾದಿ ಬಂಧನಗಳುಂಟಾಯಿತು. ಈ ಆತ್ಮಾನಾತ್ಮ ಸ್ವರೂಪ ವಿಚಾರದಿಂದುಂಟಾದ ಜ್ಞಾನವೆಂಬ ಅಗ್ನಿಯು ಅಜ್ಞಾನದಿಂದುಂಟಾದ ಜನನ ಮರಣರೂಪ ಬಂಧವನ್ನೆಲ್ಲ ಸುಡುವುದು.

**ಬ್ರಹ್ಮಾಭಿನ್ನತ್ವವಿಜ್ಞಾನಂ ಭವಮೋಕ್ಷಸ್ಯ ಕಾರಣಂ।**
**ವಿಜ್ಞಾತವ್ಯಮತಸ್ಸಮ್ಯಗ್ಬ್ರಹ್ಮಾಭಿನ್ನತ್ವಮಾತ್ಮನಃ ॥**

ಬ್ರಹ್ಮಕ್ಕೆ ಭಿನ್ನವಾಗಿರುವ ವಸ್ತುವೇ ಇಲ್ಲವೆಂಬ ಜ್ಞಾನವೇ ಭವಬಂಧ ನಾಶಕ್ಕೆ ಕಾರಣವು. ಆದ್ದರಿಂದ ನನಗೂ ಬ್ರಹ್ಮನಿಗೂ ಭೇದವಿಲ್ಲವೆಂಬುದನ್ನು ಚನ್ನಾಗಿ ತಿಳಿಯಬೇಕು. ಮತ್ತು ಜ್ಞಾನವಾಸಿಷ್ಠದಲ್ಲಿ ವಸಿಷ್ಠರು ರಾಮನಿಗೆ ಹೀಗೆ ಹೇಳುತ್ತಾರೆ.—

**ದೇಹೋಹಮಿತ್ಯೇವ ಜಡಸ್ಯ ಬುದ್ಧಿರ್ದೇಹೇ ಚ ಜೀವೇ ವಿದುಷಸ್ತ್ವಹಂಧೀಃ।**
**ವಿವೇಕವಿಜ್ಞಾನವತೋಮಹಾತ್ಮನಾಂ ಬ್ರಹ್ಮಾಹಮಿತ್ಯೇವಮತಿಸ್ಸದಾತ್ಮನಿ ॥**

ಅಜ್ಞಾನಿಗೆ ಈ ದೇಹವೇ ನಾನು ಎಂದು ದೇಹದಲ್ಲಿ ಆತ್ಮತ್ವ ಬುದ್ಧಿಯಿರುತ್ತೆ. ತರ್ಕವ್ಯಾಕರಣಗಳನ್ನು ಓದಿದ ಪಂಡಿತರಿಗೆ ನಾನು ಜೀವನು ಎಂದು ತಮ್ಮಲ್ಲಿ ಜೀವತ್ವಬುದ್ಧಿಯಿರುತ್ತೆ. ವಿವೇಕಜ್ಞಾನವುಳ್ಳ ಮಹಾತ್ಮರಿಗೆ ಬ್ರಹ್ಮವೇ ನಾನು ಎಂಬುದಾಗಿ ತಮ್ಮಲ್ಲಿ ಬ್ರಹ್ಮಭಾವನೆಯು ಇರುವುದು.

ಮಹಾವಾಕ್ಯದರ್ಪಣವೆಂಬ ಗ್ರಂಥದಲ್ಲಿ—

**ಜನ್ಮಭಿಃ ಕೋಟಿಪರ್ಯಂತೈರ್ನಿವೃತ್ತೈಃ ಪುಣ್ಯಕರ್ಮಭಿಃ।**
**ಶುದ್ಧಾತ್ಮನಾಂ ಸತಾಮೇವ ಜಿಜ್ಞಾಸಾತ್ಮ ನಿಜಾಯತೇ ॥**

ಕೋಟಿ ಜನ್ಮಗಳಿಂದ ಮಾಡಿದ ಪುಣ್ಯಕರ್ಮಗಳಿಂದ ಪರಿಶುದ್ಧರಾದ ಮಹಾತ್ಮರಿಗೇನೇ ಆತ್ಮವಿಚಾರ ಮಾಡಬೇಕೆಂಬ ಇಚ್ಛೆಯುಂಟಾಗತಕ್ಕದು.

**ಮಿಥ್ಯಾ ಜ್ಞಾನಸ್ಯ ವಿಚ್ಛಿತ್ತಿಃ ಸಮ್ಯಜ್ಞಾನೇನ ಸಿಧ್ಯತಿ।**
**ಸಮ್ಯಜ್ಞಾನಂ ಪದಾರ್ಥಸ್ಯ ವಿಚಾರೇಣೈವನಾನ್ಯಥಾ ॥**

ಮಿಥ್ಯಾಜ್ಞಾನದ ನಾಶವು ಸಮ್ಯಜ್ಞಾನದಿಂದುಂಟಾಗುವುದು. ಸಮ್ಯಜ್ಞಾನ ವುಂಟಾಗುವುದಕ್ಕಾಗಿ ಸಕಲ ಕರ್ಮಗಳನ್ನೂ ಬಿಟ್ಟು ಬುದ್ಧಿವಂತನು ವಿಚಾರ ಮಾಡಬೇಕು.

ಸೂತಸಂಹಿತೆಯಲ್ಲಿ--

**ಆತ್ಮಾನಂ ಚ ಜಗಚ್ಚಾಪಿ ಪೂರ್ಣಂ ಬ್ರಹ್ಮೈವ ಪಶ್ಯತಃ ।**
**ನರಸ್ಯೈವ ವಿಮುಕ್ತಿಸ್ಸ್ಯಾನ್ನಕಿಂಚಿದ್ಭೇದದರ್ಶಿನಃ ॥**

ತನ್ನನ್ನೂ ಈ ಜಗವನ್ನೂ ಪೂರ್ಣಬ್ರಹ್ಮಸ್ವರೂಪವನ್ನಾಗಿ ತಿಳಿಯತಕ್ಕವನಿಗೇನೇ ಮುಕ್ತಿಯುಂಟಾಗುವುದು. ಅಣುಮಾತ್ರವಾದರೂ ಭೇದವನ್ನು ಎಣಿಸತಕ್ಕವನಿಗೆ ಮುಕ್ತಿಯಿಲ್ಲವು. ಈ ರೀತಿ ಬ್ರಹ್ಮಜ್ಞಾನದಿಂದಲೇ ಮೋಕ್ಷವು. ಜ್ಞಾನಿಗಿಂತಲೂ ದೊಡ್ಡವನಿಲ್ಲವೆಂದು ಅನೇಕ ಶ್ರುತಿಗಳಲ್ಲೂ ಹೇಳಲ್ಪಡುವುದು. ಮತ್ತು ಕರ್ಮವಿಪಾಕವೆಂಬ ಧರ್ಮಶಾಸ್ತ್ರದಲ್ಲಿ ಹೇಳುವದೇನಂದರೆ—ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತಕ್ಕೆ ಮೀರಿದ ಪಾಪವನ್ನು ಮಾಡಿದವನಿಗೆ ಯಾವರೀತಿ ಪ್ರಾಯಶ್ಚಿತ್ತ ಮಾಡಬೇಕೆಂಬ ವಿಚಾರದಲ್ಲಿ—

**ಚತ್ವಾರೋ ವೇದಧರ್ಮಜ್ಞಾಃ ಸರ್ಷತ್ರ್ಯೈ ವಿದ್ಯ ಏವವಾ ।**
**ಸಾಬ್ರೂತೇಯಂಸಧರ್ಮಸ್ಸ್ಯಾದೇಕೋವಾಧ್ಯಾತ್ಮವಿತ್ತಮಃ ॥**

ವೇದ, ಧರ್ಮಶಾಸ್ತ್ರ ಇವುಗಳನ್ನು ಓದಿದವರೇ ಆಗಲಿ, ಅಥವಾ ಋುಗ್ಯಜುಸ್ಸಾಮಗಳೆಂಬ ಮೂರು ವೇದಗಳನ್ನು ಓದಿದವರೇ ಆಗಲಿ, ನಾಲ್ಕು ಜನಗಳು ಕೂಡಿ ಒಂದೇ ವಿಧವಾಗಿ ಯಾವ ಪ್ರಾಯಶ್ಚಿತ್ತವನ್ನು ಹೇಳುತ್ತಾರೋ ಅದನ್ನು ಮಾಡಬೇಕು. ಆತ್ಮಜ್ಞಾನಿಯಾದವನು ಒಬ್ಬನೇ ಯಾವುದನ್ನು ಹೇಳುತ್ತಾನೋ ಅವನ್ನೂ ಮಾಡಬಹುದು ಎಂದು ಹೇಳಿರುವುದರಿಂದ ಆತ್ಮಜ್ಞಾನಿಯೇ ದೊಡ್ಡವನು. ಮತ್ತು ಶ್ರಾದ್ಧದಲ್ಲಿ—

**( ಅಕ್ರೋಧನೈಶ್ಶೌಚಪರೈಸ್ಸತತಂ ಬ್ರಹ್ಮವಾದಿಭಿಃ । )**

ಶಾಂತರಾಗಿ, ಶುಚಿಪರರಾಗಿ, ಸರ್ವದಾ ಬ್ರಹ್ಮವಿಜ್ಞಾನಿಗಳಾದ ನಿಮ್ಮಿಂದ ಶ್ರಾದ್ಧವಾಗಬೇಕೆಂದು ಹೇಳಿದೆ.

ಮತ್ತು ಶಿವಗೀತೆಯಲ್ಲಿ—

**ಯತ್ಫಲಂ ಲಭತೇ ಮರ್ತ್ಯಃ ಕೋಟಿಬ್ರಾಹ್ಮಣ ಭೋಜನೈಃ ।**
**ತತ್ಫಲಂ ಸಮವಾಪ್ನೋತಿ ಜ್ಞಾನಿನಂ ಯಸ್ತು ಭೋಜಯೇತ್ ॥**
**ಜ್ಞಾನಿಭ್ಯೋದೀಯತೇ ಯಸ್ತು ತತ್ಕೋಟಿಗುಣಿತಂ ಭವೇತ್ ।**

**ಜ್ಞಾನವಂತಂ ದ್ವಿಜಂ ಯಸ್ತು ದ್ವಿಷತೇ ಚ ನರಾಧಮಃ ॥**
**ಸಶುಷ್ಯಮಾಣೋಽಮ್ರಿಯತೇ ಯಸ್ಮಾದೀಶ್ವರ ಏವಸಃ ।**

ಕೋಟಿ ಬ್ರಾಹ್ಮಣರಿಗೆ ಸಂತರ್ಪಣೆ ಮಾಡುವುದರಿಂದ ಮನುಷ್ಯನು ಯಾವ ಫಲವನ್ನು ಪಡೆಯುತ್ತಾನೆಯೋ, ಆ ಫಲವನ್ನು ಒಬ್ಬ ಜ್ಞಾನಿಗೆ ಅನ್ನವನ್ನಿಡುವುದರಿಂದ ಉಂಟಾಗುತ್ತದೆ. ಜ್ಞಾನಿಗೆ ಕೊಟ್ಟ ದಾನವು ಒಂದಕ್ಕೆ ಕೋಟಿಯಾಗುತ್ತೆ. ಜ್ಞಾನಿಯು ಪರಮೇಶ್ವರನೇ ಆಗಿರುವುದರಿಂದ ಅವನನ್ನು ಯಾರು ದ್ವೇಷಿಸುತ್ತಾರೆಯೋ ಅವರು ನಾಶವನ್ನು ಹೊಂದುವರು. ಈ ರೀತಿ ಜ್ಞಾನವೇ ಅಧಿಕವಾದುದು. ಜ್ಞಾನದಿಂದಲೇ ಮುಕ್ತಿ. ಕರ್ಮದಿಂದ ಮುಕ್ತಿಯಿಲ್ಲವೆಂದು ಸಿದ್ಧಾಂತವಾಗಿರಲು ಕೆಲವರು ಕರ್ಮದಿಂದ ಕೂಡಿದ ಜ್ಞಾನವೇ ಮುಖ್ಯವು. ಪಕ್ಷಿಯು ಹಾರುವುದಕ್ಕೆ ಎರಡು ರೆಕ್ಕೆಗಳು ಇಲ್ಲದಿದ್ದರೆ ಹೇಗೆ ಆಗುವುದಿಲ್ಲವೋ, ಅದರಂತೆ ಕರ್ಮ-ಜ್ಞಾನಗಳೆಂಬ ಎರಡು ರೆಕ್ಕೆಗಳಿಲ್ಲದಿರಲು ಮೋಕ್ಷಕ್ಕೆ ಹಾರುವುದಕ್ಕಾಗುವದಿಲ್ಲ. ಕರ್ಮವಿಲ್ಲದ ಜ್ಞಾನದಿಂದಲೂ, ಜ್ಞಾನವಿಲ್ಲದ ಕರ್ಮದಿಂದಲೂ ಸಹ ಮುಕ್ತಿಯಾಗದು. ಇವೆರಡೂ ಇರಬೇಕೆಂದು ಹೇಳುತ್ತಾರೆ. ಈ ವಿಷಯದಲ್ಲಿ ಸಮಾಧಾನವೇನೆಂದರೆ— ಕತ್ತಲೆಗೂ ಬೆಳಕಿಗೂ ಹೇಗೆ ಮೇಳನವಿಲ್ಲವೋ ಹಾಗೆ ಜ್ಞಾನಕ್ಕೂ ಕರ್ಮಕ್ಕೂ ಮೇಳನ ಘಟಿಸದು. ಏಕಂದರೆ—ನಾನೇ ಬ್ರಹ್ಮವೆಂಬ ಭಾವನೆಯಿಂದ ಕೂಡಿದ್ದು ಜ್ಞಾನ; ನಾನು ಸೇವಕ ಶಿವನು ಸೇವ್ಯ, ನಾನು ರಕ್ಷ್ಯನು ಶಿವನು ರಕ್ಷಕನು, ನಾನು ಪೂಜಕನು ಶಿವನು ಪೂಜ್ಯನು ಎಂಬ ಭೇದ ಭಾವನೆಯಿಂದ ಕೂಡಿಕೊಂಡಿರುವುದು ಕರ್ಮ. ಇವೆರಡರಲ್ಲಿ ಕರ್ಮವನ್ನನುಸರಿಸಲು ಜ್ಞಾನಕ್ಕೆ ವಿರೋಧ. ಜ್ಞಾನವನ್ನನುಸರಿಸಿದರೆ ಕರ್ಮಕ್ಕೆ ವಿರೋಧ. ಆದುದರಿಂದ ಜ್ಞಾನ-ಕರ್ಮಗಳಿಗೆ ಮೇಳನವೆಂತಹುದು ? ಆದುದರಿಂದ ಜ್ಞಾನಿಗೆ ಸ್ಥೂಲದೇಹವನ್ನು ಅನುಸರಿಸಿಕೊಂಡಿರುವ ಜಾತ್ಯುಕ್ತವಾದ ಸಂಧ್ಯಾದಿ ನಿತ್ಯನೈಮಿತ್ತಿಕ ಕರ್ಮಗಳ ಹೊರತು ಇನ್ನಾವ ಕರ್ಮಗಳನ್ನೂ ಅವನು ಮಾಡಬೇಕಾಗಿಲ್ಲ.

**(ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇಪರಿಸಮಾಪ್ಯತೇ)**

ಕರ್ಮವೆಲ್ಲವೂ ಜ್ಞಾನದಲ್ಲಿಯೆ ಐಕ್ಯವಾಗಿದೆಯೆಂದು ಭಗವದ್ಗೀತೆಯಲ್ಲಿ ಹೇಳಿರುತ್ತಾಗಿ ಜ್ಞಾನಿಗೆ ಆತ್ಮವಿಚಾರಮಾಡುವ ಒಂದೇ ಕರ್ಮ ವಿನಹ ಇನ್ನಾವ ಕರ್ಮವೂ ಇಲ್ಲ. ಇದು ನಮ್ಮ ಸ್ವಕಪೋಲಕಲ್ಪಿತವಾದುದಲ್ಲ. ಈ ವಿಷಯದಲ್ಲಿ ಅನೇಕ ಪ್ರಮಾಣಗಳುಂಟು.

ಭಗವದ್ಗೀತೆಯಲ್ಲಿ—

**ಸರ್ವ ಧರ್ಮಾ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷ ಯಿಷ್ಯಾಮಿ ಮಾಶುಚಃ॥**

ಎಂಬ ಶ್ಲೋಕಕ್ಕೆ ಶ್ರೀ ಶಂಕರಭಗವತ್ಪಾದರು ಬರೆದಿರುವ ಭಾಷ್ಯ ವೇನೆಂದರೆ—

**(ಕಿಮಸ್ಮಿನ ಗೀತಾಶಾಸ್ತ್ರೇಪರಂ ನಿಶ್ರೇಯಸ ಸಾಧನಂ ನಿಶ್ಚಿತಂ,**
**ಕಿಂ ಜ್ಞಾನಂ ? ಕರ್ಮವಾ; ಅಹೋಸ್ವಿದುಭಯಮಿತಿ)**

ಅಂದರೆ ಈ ಗೀತಾಶಾಸ್ತ್ರದಲ್ಲಿ ಮೋಕ್ಷಕ್ಕೆ ಮುಖ್ಯ ಸಾಧನವಾಗಿ ನಿಶ್ಚಯಿಸಲ್ಪಟ್ಟದು ಜ್ಞಾನವೋ, ಕರ್ಮವೊ, ಇಲ್ಲ ಜಾನಕರ್ಮಗಳೆರಡೂನೊ ಎಂದು ವಿಕಲ್ಪಿಸಿಕೊಂಡು ಕರ್ಮವೂ ಅಲ್ಲ, ಕರ್ಮಜ್ಞಾನಗಳೆರಡೂ ಅಲ್ಲ, ಕೇವಲ ಜ್ಞಾನವೊಂದೇ ಎಂದು ನಿಶ್ಚಯಿಸಲ್ಪಟ್ಟಿಥೆ. ಮತ್ತು ಸ್ವಾತ್ಮಾನಂದ ಪ್ರಕಾಶಿಕಾ ಎಂಬ ಗ್ರಂಥವಲ್ಲಿ ಹೇಳಿರುವುದೇನಂದರೆ—

**ಕರ್ಮಭಿರೇವನಬೋಧಃ ಪ್ರಭವತಿ ಗುರೂಣಾವಿನಾ ದಯಾನಿಧಿನಾ ।**
**ಆಚಾರ್ಯವಾ ಹಿ ಪುರುಷೋ ವೇದೇತ್ಯರ್ಥಸ್ಯ ವೇದ ಸಿದ್ಧತ್ವಾತ್ ॥**

ಗುರುವಿಲ್ಲದಮೇಲೆ ಕರ್ಮ್ಮದಿಂದ ಜ್ಞಾನ ಉಂಟಾಗಲಾರದು. ಗುರುವುಳ್ಳವನೇ ಬ್ರಹ್ಮವನ್ನು ತಿಳಿಯತಕ್ಕವನೆಂದು ವೇದದಲ್ಲಿ ಹೇಳಿರುವ ಕಾರಣ—

**ಕರ್ಮಪ್ರಕರಣ ಪಠಿತಂ ಜ್ಞಾನಂ ಕರ್ಮಾಂಗಮಿಷ್ಯತೇ ಪ್ರಾಜ್ಞೈಃ ।**
**ಭಿನ್ನಪ್ರಕರಣ ಭಾಜಃ ಕರ್ಮಾಂಗತ್ವಂ ಕಥಂ ಭವೇತ್ ಜ್ಞಪ್ತೇಃ ॥**

ಕರ್ಮಕಾಂಡೋಕ್ತವಾಗಿ ಜ್ಞಾನವು ಕರ್ಮವೇ ಅಂಗವಾಗಿ ಉಳ್ಳದ್ದೆಂದು ಕೆಲವರು ಹೇಳುತ್ತಾರೆ. ಕರ್ಮಕ್ಕೆ ಭಿನ್ನಿಸಿರುವ ಜ್ಞಾನಕ್ಕೆ ಕರ್ಮಾಗತ್ವವು ಹೇಗೆತಾನೆ ಸಿದ್ಧಿಸುವುದು ?

**ಅಧಿಕಾರಿವಿಷಯಭೇದೌ ಕರ್ಮಜ್ಞಾನಾತ್ಮಕಾವುಭೌ ಕಾಂಡೌ ।**
**ಏವಂಸತಿ ಕಥಮನಯೋರಂಗಾಂಗಿತ್ವಂ ಕಥಂ ಭವೇತ್ ಜ್ಞಪ್ತೇಃ**

ಕರ್ಮಕಾಂಡ ಜ್ಞಾನಕಾಂಡ ಇವೆರಡು ಅಧಿಕಾರಿ ವಿಷಯವಾಗಿ ಹೇಳಲ್ಪಟ್ಟವು. ಮಂದಾಧಿಕಾರಿಗೆ ಕರ್ಮವು, ಪೂರ್ಣಾಧಿಕಾರಿಗೆ ಜ್ಞಾನವು ಹೇಳಲ್ಪಟ್ಟಿರುವಲ್ಲಿ ಇವೆರಡಕ್ಕೂ ಅಂಗಾಂಗಿತ್ವವು ಹೇಗೆ ಘಟಿಸುತ್ತದೆ ? ಜ್ಞಾನಕಾಂಡವು ಕರ್ಮಕಾಂಡಕ್ಕೆ ಸಂಬಂಧಿಸುವುದಿಲ್ಲ. ಕರ್ಮಕಾಂಡವು ಜ್ಞಾನಕಾಂಡಕ್ಕೆ ಸಂಬಂಧಿಸುವುದಿಲ್ಲ.

**ಜ್ಞಾನಂ ಕರ್ಮಣಿ ನಸ್ಯಾತ್ ಜ್ಞಾನೇ ಕರ್ಮಾದಯೋಽಪಿತಥಾನಸ್ಯಾತ್ ।**
**ಕಥಮನಯೋರುಭಯೋಸ್ತಪನ ತಮೋವತ್ಸಮುಚ್ಚಯೋ ಭವತಿ ॥**

ಕರ್ಮದಲ್ಲಿ ಜ್ಞಾನವಿಲ್ಲ. ಜ್ಞಾನದಲ್ಲಿ ಕರ್ಮವಿಲ್ಲ. ಹೀಗಿರುವಲ್ಲಿ ಅಂಧಕಾರ-ಸೂರ್ಯರಂತೆ ಇವೆರಡಕ್ಕೂ ಒಂದುಕಡೆ ಸೇರುವಿಕೆಯು ಉಂಟಾದೀತೆ ?

**ತಸ್ಮಾನ್ಮೋಹನಿವೃತ್ತೌ ಜ್ಞಾನಂ ನಸಹಾಯಮತ್ರಚಾರ್ಪ್ಯರ್ಥಯತೇ ।**
**ಯದ್ವದ್ಘನತರ ತಿಮಿರಪ್ರಕರ ಪರಿಧ್ವಂಸನೇ ಸಹಸ್ರಾಂಶುಃ ॥**

ಆದ್ದರಿಂದ ಲೋಕವನ್ನೆಲ್ಲ ತುಂಬಿಕೊಂಡಿರುವ ಕತ್ತಲೆಯನ್ನು ಯಾವ ಸಹಾಯವನ್ನೂ ಅಪೇಕ್ಷೆಮಾಡದೆ ಸೂರ್ಯನು ಹೇಗೆ ನಾಶಮಾಡುತ್ತಾನೋ ಅದರಂತೆ ಮೋಹವನ್ನು ನಾಶಪಡಿಸುವ ವಿಷಯದಲ್ಲಿ ಜ್ಞಾನವು ಇತರ ಸಹಾಯವನ್ನಪೇಕ್ಷಿಸುವುದಿಲ್ಲ.

**ಕರ್ತೃ ಚ ಕರ್ಮ ಚ ಯಸ್ಯ ಸ್ಫುರತಿ ಬ್ರಹ್ಮೈವ ತನ್ನಜಾನಾತಿ ।**
**ಯಸ್ಯ ನ ಕರ್ತವ್ಯ ನ ಕರ್ಮಸ್ಫುಟತರಮಯಮೇವವೇದಿತುಂ ಕ್ರಮತೇ॥**

ಯಾವನಿಗೆ ಕರ್ತೃತ್ವವೂ ಕರ್ಮವೂ ಇದೆಯೋ ಅವನು ಬ್ರಹ್ಮವನ್ನು ತಿಳಿದವನೇ ಅಲ್ಲ. ಯಾವನಿಗೆ ಇವೆರಡೂ ಇಲ್ಲವೋ ಅವನೇ ಬ್ರಹ್ಮಸ್ವರೂಪವನ್ನು ಚನ್ನಾಗಿ ತಿಳಿಯಲು ಶಕ್ತನು ಎಂದು ಹೇಳಿದೆ. ಮತ್ತು (ವಾಸುದೇವ ಮನನದಲ್ಲಿ) ಪಂಚಮವರ್ಣಕದಲ್ಲಿ ಹೇಳಿರುವುದೇನೆಂದರೆ—

**ಬ್ರಹ್ಮವಿತ್ । ಬ್ರಹ್ಮವಿದ್ವರ । ಬ್ರಹ್ಮವಿದ್ವರ್ಯ । ಬಹ್ಮವಿದ್ವರಿಷ್ಠಃ । ಸಏವವಿದೇಹಮುಕ್ತಃ । ಅಸೌವರಿಷ್ಠ ಏವವೃತ್ತಿಶೂನ್ಯಃ । ತಸ್ಯೈವನವಿಧಿಃ । ನನಿಷೇಧಶ್ಚ । ಅನ್ಯೇಷಾ ಮಪಿತ್ರಯಾಣಾಂ ವೃತ್ತಿಶೂನ್ಯತ್ವಾಭಾವಾತ್ । ವ್ಯವಹಾರವತ್ವಾಚ್ಚಲೋಕಾನುಗ್ರಹಾರ್ಥಂ ಸದಾಚಾರ ಏವಸ್ಥಾತವ್ಯಮಿತ್ಯುಚ್ಯತೇ । ಸತುನಿಯಮ್ಯತೇ । ತಸ್ಮಾತ್ತತ್ವಜ್ಞಾನಿನಾ ಕರ್ಮಿಣಾಂ ಮಧ್ಯೇ ಕರ್ಮಿವತ್ಕರ್ಮಾನುಷ್ಠೇಯಂ । ಜಿಜ್ಞಾಸೂನಾಂ ಮಧ್ಯೇತು ಕರ್ಮತ್ಯಕ್ತ್ವಾ ಬ್ರಹ್ಮೈವ ಸತ್ಯಂ । ಅನ್ಯತ್ಸರ್ವ ಮಸತ್ಯಮಿತಿ ಜ್ಞಾನಮೇವೋಪದೇಷ್ಟವ್ಯಂ ॥**

ಅಂದರೆ—ಬ್ರಹ್ಮವಿತ್, ಬ್ರಹ್ಮವಿದ್ವರ, ಬ್ರಹ್ಮವಿದ್ವರ್ಯ, ಬ್ರಹ್ಮವಿದ್ವರಿಷ್ಠ ಎಂಬ ಜ್ಞಾನಿಗಳು ನಾಲ್ಕು ವಿಧವಾಗಿರುವರು. ಇವರಲ್ಲಿ ಬ್ರಹ್ಮವಿದ್ವರಿಷ್ಠನೇ ವಿದೇಹಮುಕ್ತನು. ಅವನಿಗೆ ವೃತ್ತಿಶೂನ್ಯವಾಗಿರುವುದರಿಂದ ವಿಧಿನಿಷೇಧಗಳು ಯಾವುವೂ ಇಲ್ಲ. ಮಿಕ್ಕ ಮೂರು ಜನಗಳಿಗೂ ವೃತ್ತಿಶೂನ್ಯವಾಗದೇ ಇರುವುದ

ರಿಂದ ಸದಾಚಾರದಲ್ಲಿರಬೇಕೆಂದು ಹೇಳಬೇಕಾಗಿದೆ. ಸದಾಚಾರದಲ್ಲೇ ಇರಬೇಕೆಂಬ ನಿಯಾಮಕವಿಲ್ಲ. ಆದ್ದರಿಂದ ಜ್ಞಾನಿಗಳು ಲೋಕಾನುಗ್ರಹಾರ್ಥವಾಗಿ ಕರ್ಮಿಗಳ ಮಧ್ಯದಲ್ಲಿ ಕರ್ಮವನ್ನೇ ಬೋಧಿಸುತ್ತಾ ಕರ್ಮ ಮಾಡುತ್ತಾ ಇರಬೇಕು. ಆತ್ಮವಿಚಾರಮಾಡತಕ್ಕವರ ಬಳಿಯಲ್ಲಾದಲೋ ಕರ್ಮವನ್ನು ಬಿಟ್ಟು ಬ್ರಹ್ಮ,ಸತ್ಯ ಜಗತ್ತು ಮಿಥ್ಯವೆಂದು ಜ್ಞಾನವನ್ನೇ ಉಪದೇಶಮಾಡಬೇಕು ಎಂದು ಹೇಳಿದೆ. ಮತ್ತು ಉತ್ತರಗೀತೆಯಲ್ಲಿ—

**ಜ್ಞಾನಮಾತ್ರೇಣ ತೃಪ್ತಸ್ಯ ಕೃತಕೃತ್ಯಸ್ಯ ಯೋಗಿನಃ ।**
**ನೈವಾಸ್ತಿಕಿಂಚಿತ್ಕರ್ತವ್ಯಮಸ್ತಿ ಚೇನ್ನಸತತ್ವವಿತ್ ॥**

ಜ್ಞಾನದಿಂದ ತೃಪ್ತನಾಗಿ, ಕೃತಕೃತ್ಯನಾದ ಯೋಗಿಗೆ ಮಾಡಬೇಕಾದ ಕರ್ಮವು ಯಾವುದೂ ಇಲ್ಲ. ಅವನು ಕರ್ಮವನ್ನಿಟ್ಟುಕೊಂಡಿದ್ದಲ್ಲಿ ತತ್ವಜ್ಞನೇ ಅಲ್ಲ.

**ಅತ್ಯಂತ ಮಲಿನೋ ದೇಹೋ ದೇಹೀಚಾತ್ಯಂತ ನಿರ್ಮಲಃ ।**
**ಉಭಯೋರಂತರಂ ಜ್ಞಾತ್ವಾ ಕಸ್ಯಶೌಚಂ ವಿಧೀಯತೇ ॥**

ಲೋಕದಲ್ಲಿ ಇದ್ದಲು ಸ್ವಭಾವದಿಂದ ಕಪ್ಪಾದ ಪದಾರ್ಥವಾದುದರಿಂದ ಅದನ್ನು ಬೆಳ್ಳಗೆ ಮಾಡುವುದಕ್ಕೋಸ್ಕರ ತೊಳೆಯಬೇಕಾದ್ದಿಲ್ಲ. ವಜ್ರವು ಸ್ವಭಾವದಿಂದ ಶುಭ್ರವಾದ ವಸ್ತುವಾದ್ದರಿಂದ ಅದನ್ನು ತೊಳೆಯುವ ಅವಶ್ಯಕವಿಲ್ಲ. ಇವರಂತೆ ಮಲಮಾಂಸಮಯವಾದ ಈ ದೇಹವು ಅತ್ಯಂತ ಮಲಿನವಾದ್ದರಿಂದ ಇವನ್ನು ಶುದ್ಧಿಮಾಡುವುದಕ್ಕಾಗುವುದಿಲ್ಲ. ಒಳಗಿರುವ ಜೀವನು ಅತ್ಯಂತ ಶುದ್ಧನಾದ್ದರಿಂದ ಅವನನ್ನು ಶುದ್ಧನನ್ನಾಗಿ ಮಾಡುವ ಗೋಜಿಲ್ಲ. ಇವೆರಡರ ಮರ್ಮವನ್ನು ತಿಳಿದು ಇನ್ನಾವುದನ್ನು ಶುದ್ಧಿಮಾಡಬೇಕಾಗಿದೆ.

**ಅನಂತ ಕರ್ಮ ಶೌಚಂ ಚ ಜಪೋ ಯಜ್ಞಸ್ತಥೈವ ಚ ।**
**ತೀರ್ಥಯಾತ್ರಾನುಗಮನಂ ಯಾವತ್ತತ್ವಂ ನ ವಿದಂತಿ ॥**

ಅನಂತವಾದ ಕರ್ಮಗಳು:–ಶುಚಿತ್ವವು, ಜಪಗಳು, ಯಜ್ಞಾದಿಗಳು ಮತ್ತು ತೀರ್ಥಯಾತ್ರೆಗಳು ಇವೆಲ್ಲ ತತ್ವವನ್ನು ತಿಳಿಯದೇ ಇರುವವರೇ ಮಾಡತಕ್ಕದ್ದು. ಅಂದರೆ ಜ್ಞಾನಿಗೆ ಇವೆಲ್ಲಾ ಪ್ರಯೋಜನವಿಲ್ಲವೆಂದು ತಾತ್ಪರ್ಯವು.

**ವಿಜ್ಞಾಯಾಕ್ಷರತನ್ಮಾತ್ರಂ ಜೀವಿತಂ ಚ ಚಲಾಚಲಂ ।**
**ವಿಹಾಯ ಶಾಸ್ತ್ರಜಾಲಾನಿ ಯತ್ಸತ್ಯಂ ತದುಪಾಸ್ಯತಾಂ ॥**

ಈ ದೇಹವು ಅಸ್ಥಿರವೆಂದರಿತು ಸಕಲ ಶಾಸ್ತ್ರಗಳನ್ನು ಬಿಟ್ಟು ಸತ್ಯವಾಗಿಯೂ ನಾಶರಹಿತವಾಗಿಯೂ ಇರುವ ವಸ್ತುವನ್ನು ಉಪಾಸನೆ ಮಾಡಬೇಕು.

**ತೀರ್ಥಾನಿತೋಯ ರೂಪಾಣಿ ದೇವಾ್ನ ಪಾಷಾಣಮೃಣ್ಮಯಾ್ನ ।**
**ಯೋಗಿನೋನಪ್ರಪದ್ಯಂತೇಹ್ಯಾತ್ಮಜ್ಞಾನ ಪರಾಯಣಾಃ ॥**

ಆತ್ಮಜ್ಞಾನದಿಂದ ಕೂಡಿದ ಯೋಗಿಗಳು ಜಲಸ್ವರೂಪವಾದ ತೀರ್ಥಗಳನ್ನೂ, ಕಲ್ಲು ಮಣ್ಣು ಸ್ವರೂಪವಾಗಿರುವ ದೇವರನ್ನೂ ಪೂಜಿಸುವುದಿಲ್ಲ.

**ಅಗ್ನಿರ್ದೇವೋದ್ವಿಜಾತೀನಾಂ ಮುನೀನಾಂ ಹೃದಿದೈವತಂ ।**
**ಪ್ರತಿಮಾಸ್ವಲ್ಪಬುದ್ಧೀನಾಂ ಸರ್ವತ್ರ ವಿದಿತಾತ್ಮನಾಂ ॥**

ಬ್ರಾಹ್ಮಣರಿಗೆ ಅಗ್ನಿಯು ದೇವರು. ಮುನಿಗಳಿಗೆ ಹೃದಯದಲ್ಲಿ ದೇವರು. ಅಲ್ಪಬುದ್ಧಿಯುಳ್ಳ ಪಾಮರರಿಗೆ ತಾಮ್ರದ ಗೊಂಬೆಗಳೇ ದೇವರು. ಆತ್ಮಜ್ಞಾನಿಗಳಿಗೆ ಸರ್ವವೂ ದೇವರೇ.

ಮತ್ತು ಜ್ಞಾನವಾಸಿಷ್ಠದಲ್ಲಿ—

**ಅಂತಸ್ಥಮಾತ್ಮಾನಮಜಂನದೃಷ್ಟ್ವಾ ।**
**ಭ್ರಮಂತಿ ಮೂಢಾಗಿರಿಗಹ್ವರೇಷು ॥**

ಅಜ್ಞಾನಿಗಳು ಒಳಗಿರುವ ಆತ್ಮನನ್ನು ಕಾಣದೆ ಬೆಟ್ಟಗಳಲ್ಲೂ ಗುಡ್ಡಗಳಲ್ಲೂ ತಿರುಗುತ್ತಾರೆ. ಸೂತಸಂಹಿತೆಯಲ್ಲಿ—

**ತೀರ್ಥೇ ದಾನೇ ತಪೋ ಯಜ್ಞೇ ಕಾಷ್ಠೇ ಪಾಷಾಣಕೇ ಸದಾ ।**
**ಶಿವಂ ಪಶ್ಯತಿ ಮೂಢಾತ್ಮಾ ಶಿವೋ ದೇಹೇ ಪ್ರತಿಷ್ಠಿತಃ ॥**
**ಸರ್ವತ್ರಾವಸ್ಥಿತಂ ಶಾಂತಂ ನ ಪಶ್ಯಂತಿ ಚ ಶಂಕರಂ ।**
**ಜ್ಞಾನಚಕ್ಷುರ್ವಿಹೀನತ್ವಾ ದಹೋ ಮಾಯಾಬಲಂ ಮುನೇ ॥**
**ಶಿವಮಾತ್ಮನಿ ಪಶ್ಯಂತಿ ಪ್ರತಿಮಾಸುನ ಯೋಗಿನಃ ।**
**ಅನಿಜ್ಞಾನಾಂ ಭಾವನಾರ್ಥಾಯ ಪ್ರತಿಮಾಃ ಪರಿಕಲ್ಪಿತಾಃ ॥**

ತೀರ್ಥದಲ್ಲೂ, ದಾನದಲ್ಲೂ, ತಪಸ್ಸಿನಲ್ಲೂ, ಯಜ್ಞದಲ್ಲೂ, ಮರದಲ್ಲೂ, ಕಲ್ಲಿನಲ್ಲೂ ಮೂಢರು ಶಿವನನ್ನು ನೋಡುತ್ತಾರೆ. ಶಿವನು ದೇಹದಲ್ಲೇ ಇರುವನು. ಜ್ಞಾನವೆಂಬ ನೇತ್ರವಿಲ್ಲದಕಾರಣ ಶಂಕರನನ್ನು ಜಗದ್ವ್ಯಾಪಕನನ್ನಾಗಿ ಕಾಣರು. ಮಾಯಾಶಕ್ತಿಯು ಆಶ್ಚರ್ಯವಾದುದು. ಯೋಗಿಗಳು ಶಿವನನ್ನು ತಮ್ಮಲ್ಲಿಯೇ ನೋಡುತ್ತಾರೆ. ಗೊಂಬೆಗಳಲ್ಲಿ ನೋಡುವುದಿಲ್ಲ. ಮೂಢರ ಭಾವನೆಗೋಸ್ಕರ ಗೊಂಬೆಗಳು ಮಾಡಲ್ಪಟ್ಟವು. ಮಹಾವಾಕ್ಯದರ್ಪಣದಲ್ಲಿ—

**ಯಥಾ ತಂಡುಲ ಸಂಪರ್ಕಾನ್ನಾರಿಕೇಳಂ ವಿನಶ್ಯತಿ ।**
**ಯಥೈವ ಜಲಸಂಪರ್ಕಾತ್ಸಮೂಲಂ ಮಧುನಶ್ಯತಿ ।**
**ತಥಾ ಶ್ರವಣಜೋ ಬೋಧಃ ಕರ್ಮಯೋಗಾದ್ವಿನಶ್ಯತಿ ॥**

ತಂಡುಲಸಂಪರ್ಕದಿಂದ ತೆಂಗಿನಕಾಯಿಯು, ಹೇಗೆ ನಾಶವಾಗುವುದೋ ಜಲಸಂಪರ್ಕದಿಂದ ಜೇನು ಹೇಗೆ ಕೆಡುವುದೋ ಅದರಂತೆ ಶ್ರವಣ ಮನನಗಳಿಂದುಂಟಾದ ಆತ್ಮಜ್ಞಾನವು ಕರ್ಮಸಂಪರ್ಕವಾದರೆ ಕೆಡುವುದು. ಮತ್ತು ಮಹಾದೇವ ಸರಸ್ವತೀಸ್ವಾಮಿಗಳಿಂದ ವಿರಚಿತವಾದ ತತ್ವಾನುಸಂಧಾನವೆಂಬ ಗ್ರಂಥದಲ್ಲಿ ಹೇಳಿರುವುದೇನಂದರೆ—

**ನತುಜ್ಞಾನಿನೋ ಧ್ಯಾನ ವಿಧಿಃ ದೇಹಾಭಿಮಾನ ಶೂನ್ಯ ।**
**ತಯೋಕರ್ತೃತ್ವಾಭಾವೇನ ತಸ್ಯ ವಿಧಿಃ ಕಿಂ ಕರತ್ವಾ ಯೋಗಾತ್ ॥**

"ದೇಹವೇ ನಾನು'' ಎಂಬ ಭಾವನೆಯಿಲ್ಲದಿರುವ ಕಾರಣ ನಾನು ಮಾಡಿದೆನು ಎಂಬ ಕರ್ತೃತ್ವವಿಲ್ಲದ್ದರಿಂದ ಜ್ಞಾನಿಯು ಕರ್ಮವನ್ನು ವಿಧಿಸುವ ಶಾಸ್ತ್ರಕ್ಕೆ ಅಧೀನನಲ್ಲವಾಗಿ ಜ್ಞಾನಿಗೆ ದೇವತಾಧ್ಯಾನಾದಿ ಕರ್ಮಗಳಿಲ್ಲ.
ಬ್ರಹ್ಮಸೂತ್ರಭಾಷ್ಯದಲ್ಲಿ—

**ಅಹಂ ಬ್ರಹ್ಮಾಸ್ಮೀತ್ಯೇ ತದವಸಾನಾ ಏವ ಸರ್ವೇವಿಧಯಃ ।**
**ಸರ್ವಾಣಿ ಚ ಶಾಸ್ತ್ರಾಣಿ ವಿಧಿಪ್ರತಿಷೇಧ ಮೋಕ್ಷಪರಾಣಿ ॥**

ಅಂದರೆ—"ನಾನೇ ಬ್ರಹ್ಮನಾದೆ'' ಎಂಬ ಜ್ಞಾನವುಂಟಾಗುವವರಿವಿಗೇನೆ ಎಲ್ಲಾ ವಿಧಿಗಳು. ವಿಧಿನಿಷೇಧಗಳನ್ನು ಹೇಳುವ ಶಾಸ್ತ್ರಗಳು ಅಂದರೆ—ಬ್ರಹ್ಮಜ್ಞಾನಿಯನ್ನು ವಿಧಿನಿಷೇಧಶಾಸ್ತ್ರಗಳು ಯಾವುದೂ ಬಂಧಿಸಲಾರವೆಂದು ಭಾವವು. ವಿಷ್ಣುಪುರಾಣದಲ್ಲಿ—

**ಅಹಂ ಹರಿಸ್ಸರ್ವಮಿದಂ ಜನಾರ್ದನೋ ನಾನ್ಯತ್ತತಃ ಕಾರಣ**
**ಕಾರ್ಯಜಾತಂ । ಈದೃಙ್ಮನೋಯಸ್ಯ ನತಸ್ಯ ಭೂಯೋ**
**ಭವೋದ್ಭವಾದ್ವಂದ್ವಗದಾಭವಂತಿ ॥**

ನಾನೇ ಹರಿಯು, ಈ ಜಗವೆಲ್ಲಾ ಜನಾರ್ದನನೆ, ಈ ಹರಿಗಿಂತಲೂ ಭಿನ್ನವಾಗಿರುವ ಕಾರ್ಯಕಾರಣಸಮೂಹವು ಯಾವುದೂ ಇಲ್ಲ. ಈ ರೀತಿ ಭಾವನೆ ಯಾವನಿಗಿರುವುದೋ ಅವನಿಗೆ ಭವದಿಂದ ಹುಟ್ಟುವ ದ್ವಂದ್ವರೋಗವಿಲ್ಲ. ದ್ವಂದ್ವ ರೋಗವೆಂದರೆ ಸುಖ ದುಃಖ, ಪುಣ್ಯ ಪಾಪ, ಸ್ವರ್ಗ ನರಕ, ಜನನ ಮರಣ ಇತ್ಯಾದಿಗಳು. ಮತ್ತು ಮಹಾಭಾರತದಲ್ಲಿ—

**ಯಥಾ ಸ್ವಪ್ನಪ್ರಪಂಚೋಯಂ ಮಯಿಮಾಯಾ ವಿಜೃಂಭಿತಃ ।**
**ತದ್ವತ್ ಜಾಗ್ರತ್ಪ್ರಪಂಚೋಯಂ ಮಯಿ ಮಾಯಾವಿಜೃಂಭಿತಃ ।**
**ಇತಿಯೋ ವೇದವೇದಾಂತೈಸ್ಸೋತಿ ವರ್ಣಾಶ್ರಮೀ ಭವೇತ್ ॥**

ಸ್ವಪ್ನದಲ್ಲಿ ತೋರುವ ಪ್ರಪಂಚವೆಲ್ಲಾ ಹೇಗೆ ನನ್ನಲ್ಲಿ ಮಾಯೆಯಿಂದ ಕಲ್ಪಿಸಲ್ಪಟ್ಟಿತೋ ಹಾಗೆಯೇ ಜಾಗ್ರತ್ಕಾಲದಲ್ಲಿ ಕಾಣುವ ಪ್ರಪಂಚವೆಲ್ಲಾ ನನ್ನಲ್ಲಿಯೇ ಮಾಯೆಯಿಂದ ಕಲ್ಪಿಸಲ್ಪಟ್ಟಿತು. ಈ ರೀತಿಯಾಗಿ ಯಾವನು ವೇದಾಂತದಿಂದ ತಿಳಿಯುತ್ತಾನೆಯೋ ಅವನು ವರ್ಣಾಶ್ರಮಗಳನ್ನೆಲ್ಲಾ ಮೀರಿದವನು. ಅಂದರೆ--ಸ್ವಪ್ನದಲ್ಲಿ ತೋರುವುದೆಲ್ಲಾ ಹೇಗೆ ಸುಳ್ಳೋ ಅದರಂತೆಯೇ ಜಾಗ್ರತ್ಕಾಲದಲ್ಲಿ ತೋರುವುದೂ ಸುಳ್ಳಾದುದು ಎಂದು ಯಾವನು ವೇದಾಂತದಿಂದ ತಿಳಿಯುವನೋ ಅವನಿಗೆ ಯಾವ ವಿಧಿಯೂ ಇಲ್ಲವೆಂದು ತಾತ್ಪರ್ಯ.

ವಿವೇಕಚೂಡಾಮಣಿಯಲ್ಲಿ—

**ಸ್ಥೂಲಸ್ಯ ಸಂಭವ ಜರಾಮರಣಾದಿ ಧರ್ಮಾಸ್ಸ್ಥೌಲ್ಯಾದಯೋ ಬಹುವಿಧಾಶ್ಶಿಶುತಾದ್ಯವಸ್ಥಾಃ । ವರ್ಣಾಶ್ರಮಾದಿ ನಿಯಮಾ ವಿವಿಧಾಮಯಾಸ್ಸ್ಯುಃ ಪೂಜಾವಮಾನ ಬಹುಮಾನ ಮುಖಾ ವಿಶೇಷಾಃ ॥**

ಹುಟ್ಟುವುದು, ಸಾಯುವುದು, ಮುದಿತನ, ಸ್ಥೂಲವಾಗಿರುವುದು, ಸಣ್ಣಗಿರುವುದು, ಬಾಲ್ಯಯೌವನಾದ್ಯವಸ್ಥೆಗಳು, ಬ್ರಾಹ್ಮಣ, ಶೂದ್ರನೆಂಬ ವರ್ಣಾದಿಗಳು ಬ್ರಹ್ಮಚಾರಿ, ಗೃಹಸ್ಥ ಮೊದಲಾದ ಆಶ್ರಮಗಳು, ರೋಗಗಳು, ಪೂಜೆ, ಅವಮಾನ ಮಾನ, ಬಹುಮಾನ ಇತ್ಯಾದಿಗಳೆಲ್ಲ ಸ್ಥೂಲ ದೇಹಕ್ಕೆ ಹೊರತು ನಿನಗಲ್ಲ.

**ಲೋಕಾನುವರ್ತನಂ ತ್ಯಕ್ತ್ವಾ ತ್ಯಕ್ತ್ವಾ ಶಾಸ್ತ್ರಾನುವರ್ತನಂ ।**
**ದೇಹಾನುವರ್ತನಂ ತ್ಯಕ್ತ್ವಾ ಸ್ವಾಧ್ಯಾಸಾಪನಯಂಮುರು ॥**

ಲೋಕಾನುಸರಣಾ, ಶಾಸ್ತ್ರಾನುಸರಣಾ, ದೇಹಾನುಸರಣೆಯನ್ನೆಲ್ಲಾ ಬಿಟ್ಟು ನಿನ್ನಲ್ಲಿ ಅಧ್ಯಾಸವಾಗಿರುವ ಜೀವತ್ವವನ್ನು ಕಳೆದುಕೋ.

ಸರ್ವಸಾರೋಪನಿಷತ್ತಿನಲ್ಲಿ—

**ನ ಚರ್ಮಣೋನ ರಕ್ತಸ್ಯ ನ ಮಾಂಸಸ್ಯ ನ ಚಾಸ್ಥಿನಃ ।**
**ನ ಜಾತಿರಾತ್ಮನೋ ಜಾತಿಃ ವ್ಯವಹಾರ ಪ್ರಕಲ್ಪಿತಾ ॥**

ಚರ್ಮಕ್ಕೂ, ರಕ್ತಕ್ಕೂ, ಮಾಂಸಕ್ಕೂ, ಮೂಳೆಗೂ ಜಾತಿಯಿಲ್ಲ. ಆತ್ಮನಿಗೂ ಜಾತಿಯಿಲ್ಲ. ಈ ಜಾತಿಯೆಂಬದು ವ್ಯವಹಾರಕ್ಕೋಸ್ಕರ ಕಲ್ಪಿಸಲ್ಪಟ್ಟಿತು.

ವರಾಹೋಪನಿಷತ್ತಿನಲ್ಲಿ—

**ಉಪಸಮೀಪೆಯೋ ವಾಸಃ ಜೀವಾತ್ಮ ಪರಮಾತ್ಮನೋಃ ।**
**ಉಪವಾಸಸ್ಸವಿಜ್ಞೇಯೋ ನತುಕಾಯಸ್ಯ ಶೋಷಣಂ ॥**

ಜೀವ ಪರಮರಿಬ್ಬರೂ ಐಕ್ಯವಾಗಿ ಇರತಕ್ಕುದೇ ಉಪವಾಸವು. ಅದನ್ನು ಬಿಟ್ಟು ಶರೀರವನ್ನು ಶೋಷಿಸುವುದು ಉಪವಾಸವಲ್ಲ.

ಮಹಾವಾಕ್ಯದರ್ಪಣದಲ್ಲಿ—

**ರೂಪಂ ನಾಮ ಚ ಜಾತಿಂ ಚ ಕಲ್ಪಯಿತ್ವಾ ಸ್ವಶಕ್ತಿತಃ ।**
**ಬ್ರಹ್ಮಜ್ಞಮಪಿವಾ ಚಿತ್ತಂ ಸಂಸಾರಯತಿಪೂರುಷಂ ॥**

ರೂಪು, ನಾಮ, ಜಾತಿ ಇವುಗಳನ್ನು ಮನಸ್ಸು ತನ್ನ ಶಕ್ತಿಯಿಂದ ಕಲ್ಪಿಸಿ ಬ್ರಹ್ಮಜ್ಞಾನಿಯನ್ನೂ ಸಂಸಾರದಲ್ಲಿ ಕೆಡಹುತ್ತದೆ.

ವಾಮನಪುರಾಣದಲ್ಲಿ—

**ಅಚ್ಯುತೋಽಹಮನಂತೋಽಹಂ ಗೋವಿಂದೋಽಹಮಹಂ ಹರಿಃ ।**
**ಆನಂದೋಽಹಮಶೇಷೋಽಹಮಜೋ ಮಮೃತೋಸ್ಮ್ಯಹಂ ॥**
**ನಿತ್ಯೋಽಹಂ ನಿರ್ವಿಕಲ್ಪೋಽಹಂ ನಿರಾಕಾರೋಽಹಮವ್ಯಯಃ ।**
**ಸಚ್ಚಿದಾನಂದ ರೂಪೋಽಹಂ ಪರಿಪೂರ್ಣೋಽಸ್ಮ್ಯಹಂ ಸದಾ ।**
**ಬ್ರಹ್ಮೈವಾಹಂನಸಂಸಾರೀ ಮುಕ್ತೋಽಹಮಿತಿಭಾವಯೇತ್ ॥**

ನಾನು ಅಚ್ಯುತನು, ನಾನು ಅನಂತನು, ನಾನು ಗೋವಿಂದನು, ನಾನು ಹರಿಯು, ನಾನು ಆನಂದನು, ನಾನು ಶೇಷನು, (ಅಂದರೆ ಎಲ್ಲವೂ ನಾನೆ ಎಂದು ಭಾವ.) ನಾನು ಜನನವಿಲ್ಲದವನು, ಮರಣವಿಲ್ಲದವನು, ನಾನು ನಿತ್ಯನು, ನಿರ್ವಿಕಲ್ಪನು, ನಿರಾಕಾರನು, ಅವ್ಯಯನು ಅಜನು, ನಾನು ಸಚ್ಚಿದಾನಂದ ಸ್ವರೂಪನು, ಪರಿಪೂರ್ಣನು, ಪರಬ್ರಹ್ಮನೇ ನಾನು, ನಾನು ಸಂಸಾರಿಯಲ್ಲವೆಂದು ಭಾವಿಸಬೇಕು. ಮತ್ತು ಶೃತಿಗಳಲ್ಲಿ—

**ಸರ್ವವ್ಯಾಪಾರಮುಸ್ಸೃಜ್ಯ ಅಹಂ ಬ್ರಹ್ಮೇತಿ ಭಾವಯ ।**
**ಅಹಂ ಬ್ರಹ್ಮೇತಿ ನಿಶ್ಚಿತ್ಯ ಅಹಂ ಭಾವಂ ಪರಿತ್ಯಜ ॥**

ಸಕಲ ಕರ್ಮಗಳನ್ನೂ ಬಿಟ್ಟು ನಾನೇ ಬ್ರಹ್ಮನೆಂದು ಭಾವಿಸು. ನಾನೇ ಬ್ರಹ್ಮನೆಂದು ನಿಶ್ಚೈಸಿ ಅಹಂಕಾರವನ್ನು ಬಿಡು.

**(ಅಹಂಬ್ರಹ್ಮಾಸ್ಮೀತ್ಯನುಸಂಧಾನಂ ಕುರ್ಯಾತ್)**

ನಾನೇ ಬ್ರಹ್ಮನಾದೆನೆಂದು ಅನುಸಂಧಾನ ಮಾಡಬೇಕು. (ತಮೇವಂ ವಿದಿತ್ವಾತಿ ಮೃತ್ಯಮೇತಿ ನಾನ್ಯಃ ಪಂಥಾವಿದ್ಯತೇಽಯನಾಯ) ಬ್ರಹ್ಮನನ್ನು ಈರೀತಿ ತಿಳಿದು ಮೃತ್ಯುವನ್ನು ಅತಿಕ್ರಮಿಸುತ್ತಾನೆ. ಮುಕ್ತಿಗೆ ಬ್ರಹ್ಮವನ್ನು ತಿಳಿಯುವುದು ವಿನಹ ಬೇರೆ ಮಾರ್ಗವಿಲ್ಲ. (ತರತಿಶೋಕಮಾತ್ಮವಿತ್) ಆತ್ಮವನ್ನು ತಿಳಿದವನು ದುಃಖವನ್ನು ದಾಟುತ್ತಾನೆ. ಆತ್ಮಜ್ಞನು ಶೋಕವನ್ನು ದಾಟುತ್ತಾನೆ.

**(ಬ್ರಹ್ಮವಿದ್ಬ್ರಹ್ಮೈವಭವತಿ)**

ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ.

**(ಆತ್ಮಾನಂಚೇ ದ್ವಿಜಾನೀಯಾ ದಯಮಸ್ಮೀತಿ ಪೂರುಷಃ)**

ಪುರುಷನು ಈ ಆತ್ಮವೇ ನಾನಾದೆನೆಂದು ತನ್ನನ್ನು ತಿಳಿಯಬೇಕು.

**ಯತ್ಪೂರ್ಣಾನಂದ ಬೋಧಸ್ತದ್ಬ್ರಹ್ಮಾ ಹಮಸ್ಮೀತಿ ಕೃತಕೃತ್ಯೋ ಭವತಿ ।**

ಯಾವುದು ಸಂಪೂರ್ಣಾನಂದ ಬೋಧಸ್ವರೂಪವಾಗಿರುವುದೊ ಆ ಬ್ರಹ್ಮವೇ ನಾನಾದೆನೆಂದು ತಿಳಿದು ಮನುಷ್ಯನು ಕೃತಕೃತ್ಯನಾಗುತ್ತಾನೆ.

ವಿವೇಕಚೂಡಾಮಣಿಯಲ್ಲಿ—

**ಬೀಜಂ ಸಂಸೃತಿಭೂಮಿಜಸ್ಯತುತಮೋ ದೇಹಾತ್ಮ ಧೀರಾಂಕುರೋ**
**ರಾಗಃ ಪಲ್ಲವಮಂಬುಕರ್ಮತು ವಪುಸ್ಸ್ಕಂಧೋ ಸವಶ್ಯಾ ಖಿಕಾಃ ।**
**ಅಗ್ರಾಣೀಂ ದ್ರಿಯಸಂಹತಿಶ್ಚ ವಿಷಯಾಃ ಪುಷ್ಪಾಣಿ ದುಃಖಂ ಫಲಂ**
**ನಾನಾಕರ್ಮಸಮುದ್ಭವಂ ಬಹುವಿಧಂ ಭೋಕ್ತಾತ್ರ ಜೀವಃ ಖಗಃ ॥**

ಜನನಮರಣಾತ್ಮಕವಾದ ಸಂಸಾರವೆಂಬ ವೃಕ್ಷಕ್ಕೆ ಅಜ್ಞಾನವೇ ಬೀಜ, ದೇಹವೇ ನಾನು ಎಂಬ ಬುದ್ಧಿಯೇ ಮೊಳಕೆ, ಪತ್ನೀಪುತ್ರಾದಿಗಳಲ್ಲಿನ ಅನುರಾಗವೇ ಚಿಗುರು, ದಿನವಹಿ ಮಾಡುವ ಕರ್ಮವೇ ಗಿಡವು ಒಣಗದಂತೆ ಬೆಳೆಯುವುದ ಕ್ಕಾಗಿ ಹೊಯ್ಯುವ ನೀರು, ಶರೀರವೇ ಮಧ್ಯಮರ, ಪ್ರಾಣಗಳೇ ಕೊಂಬೆಗಳು, ಇಂದ್ರಿಯಗಳೇ ಅಗ್ರಗಳು, ವಿಷಯಾದಿಗಳೇ ಪುಷ್ಪಗಳು, ದುಃಖವೇ ಹಣ್ಣು, ಜೀವನೆಂಬ ಪಕ್ಷಿಯೇ ಈ ಫಲವನ್ನು ತಿನ್ನತಕ್ಕದ್ದು.

**ನಾಸ್ತ್ರೈರ್ನಶಸ್ತ್ರೈರನಿಲೇನವಹ್ನಿನಾಚ್ಛೇತ್ತುಂ ನಶಕ್ಯೋನ ಚ ಕರ್ಮಕೋಟಿಭಿಃ**
**ವಿವೇಕ ವಿಜ್ಞಾನಮಹಾಸಿನಾವಿನಾಧಾತುಃ ಪ್ರಸಾದೇನ ಸಿತೇನಮಂಜುನಾ ॥**

ಅಸ್ತ್ರದಿಂದಲೂ, ಶಸ್ತ್ರದಿಂದಲೂ, ಬೆಂಕಿಯಿಂದಲೂ, ಕೋಟಿಕರ್ಮಗಳಿಂ ದಲೂ ಈ ಸಂಸಾರವೆಂಬ ವೃಕ್ಷವನ್ನು ಕತ್ತರಿಸುವುದಕ್ಕಾಗುವುದಿಲ್ಲ. ವಿವೇಕ ಜ್ಞಾನವೆಂಬ ತೀಕ್ಷ್ಣವಾದ ಕತ್ತಿಯಿಂದಲೇ ಇದು ಕಡಿಯುವುದಕ್ಕೆ ಯೋಗ್ಯವಾದ್ದು

**ಮನಃ ಪ್ರಸೂತೇ ವಿಷಯಾನ ಶೇಷಾ ಸ್ಥೂಲಾತ್ಮನಾ**
**ಸೂಕ್ಷ್ಮತಯಾ ಚ ಭೋಕ್ತುಃ । ಶರೀರವರ್ಣಾಶ್ರಮ**
**ಜಾತಿಭೇದಾನ್ಗುಣ ಕ್ರಿಯಾಹೇತುಫಲಾತಿ ನಿತ್ಯಂ ॥**

ಜೀವಿಗೆ ಸ್ಥೂಲ ಸೂಕ್ಷ್ಮಭಾವದಿಂದ ಸಕಲ ವಿಷಯಗಳನ್ನೂ ಶರೀರ, ವರ್ಣ, ಆಶ್ರಮ, ಜಾತಿ, ಗುಣ, ಕ್ರಿಯೆ, ಕಾರಣ, ಫಲ ಇವುಗಳೆನ್ನೆಲ್ಲ ಮನಸ್ಸು ಉಂಟುಮಾಡುತ್ತೆ. ಅಂದರೆ, ಇವೆಲ್ಲಾ ಮನಸ್ಸಿನಿಂದ ಕಲ್ಪಿಸಲ್ಪಟ್ಟುವೇ ವಿನಹ ಆತ್ಮನಿಗಿದೊಂದೂ ಇಲ್ಲವು.

**ಜಾತಿ ನೀತಿ ಕುಲ ಗೋತ್ರ ದೂರಗಂ ನಾಮರೂಪ ಗುಣ ದೋಷವರ್ಜಿತಂ ।**
**ದೇಶ ಕಾಲ ವಿಷಯಾತಿವರ್ತಿಯದ್ಬ್ರಹ್ಮ ತತ್ವಮಸಿಭಾವಯಾತ್ಮನಿ ॥**

ಜಾತಿ ನೀತಿ ಕುಲಗೋತ್ರಗಳಿಗೆ ಸಿಕ್ಕದೆ ನಾಮರೂಪ ಗುಣಗಳೆಂಬ "ದೋಷವಿಲ್ಲದ್ದಾಗಿ ದೇಶ ಕಾಲ ವಿಷಯಗಳನ್ನು ಅತಿಕ್ರಮಿಸಿರುವುದು ಯಾವ ಯಾವದೋ ಆ ಬ್ರಹ್ಮವೇ ನೀನಾಗಿರುವೆ'' ಎಂದು ಭಾವಿಸು.

**ತ್ಯಜಾಭಿ ಮಾನಂ ಕುಲಗೋತ್ರ ನಾಮರೂಪಾಶ್ರಮೇಷ್ವಾದ್ರ್ರಶವಾಶ್ರಿತೇಷು ।**
**ಲಿಂಗಸ್ಯ ಧರ್ಮಾನಪಿಕರ್ತೃತಾದೀಂ ಸ್ತ್ಯಕ್ತ್ವಾಭವಾಖಂಡಸುಖಸ್ವರೂಪಃ ॥**

ಹಸೀಹೆಣವನ್ನು ಆಶ್ರಯಿಸಿಕೊಂಡಿರುವ ನಾಮರೂಪು ಕುಲಗೋತ್ರಗಳಲ್ಲಿ ಅಭಿಮಾನವಂ ಬಿಡು. ಲಿಂಗದೇಹ ಸಂಬಂಧವಾದ ಕರ್ತೃತ್ವಾದಿಗಳನ್ನು ಬಿಟ್ಟು ಅಖಂಡಾನಂದ ಸ್ವರೂಪನಾಗು. ಈ ಪ್ರಕಾರ ಪರಸಹಸ್ರ ಶೃತಿ ಸ್ಮೃತಿ ಪುರಾಣ ಪ್ರಾಚೀನೋಕ್ತಿಗಳ ಪ್ರಮಾಣಬಲದಿಂದ ಕರ್ಮವು ಸುತರಾಂ ಅವಶ್ಯಕವಿಲ್ಲ. ಜ್ಞಾನವೊಂದೇ ಮುಕ್ತಿಗೆ ಕಾರಣವೆಂದು ಸಿದ್ಧಾಂತವಾಗಿರಲು ಕೆಲವರು ಕರ್ಮವನ್ನು ಬಿಟ್ಟು ಬ್ರಹ್ಮವಿಚಾರವನ್ನೇ ಮಾಡಬಾರದು. ಯಾಕೆಂದರೆ—ಜ್ಞಾನ ಸಿದ್ಧಿಸದೆಹೋದರೆ ಇಲ್ಲಿ ಕರ್ಮವೂ ಇಲ್ಲದಂತಾಗಿ ಕರ್ಮಬ್ರಹ್ಮೋಭಯಭ್ರಷ್ಟತ್ವ ಬರುತ್ತದೆ. ಜ್ಞಾನಸಿದ್ಧಿಯಿಲ್ಲದಮೇಲೆ ಕರ್ಮದಿಂದಲಾದರೂ ಉಂಟಾಗುತ್ತಿರುವ ಫಲವನ್ನು ಕಳೆದುಕೊಂಡಂತೆ ಆಗುತ್ತದೆ. ಆದ್ದರಿಂದ ಕರ್ಮಜ್ಞಾನಗಳೆರಡೂ ಇರಬೇಕೆಂದು ಹೇಳುತ್ತಾರೆ. ಈ ವಿಷಯದಲ್ಲಿ ಸಮಾಧಾನವೇನಂದರೆ—ಆತ್ಮ ವಿಚಾರವೆಂಬುದು ಪುಣ್ಯವನ್ನು ಕೊಡತಕ್ಕ ಕರ್ಮಗಳಲ್ಲೆಲ್ಲಾ ಅತಿ ಶ್ರೇಷ್ಠವಾದದು. ಪ್ರತಿನಿತ್ಯವೂ ಆತ್ಮವಿಚಾರವನ್ನು ಮಾಡುವುದರಿಂದ ಉಂಟಾಗತಕ್ಕ ಫಲಕ್ಕೆ ಕೋಟಿ ಯಜ್ಞ ವ್ರತ ತಪಸ್ಸುಗಳಿಂದ ಉಂಟಾಗುವ ಫಲವು ಸಮನಾಗಲಾರದು. ಈ ವಿಷಯದಲ್ಲಿ ಅನೇಕ ಪ್ರಮಾಣಗಳುಂಟು. ಸಿದ್ಧಾಂತಕಪಿಲಗೀತೆಯಲ್ಲಿ—

**ಸ್ನಾತಂ ತೇನ ಸಮಸ್ತ ತೀರ್ಥ ನಿಚಯೋ ಸರ್ವಾಪಿ ದತ್ತಾವನೀ ।**
**ಯಜ್ಞಂ ಚಾಪಿ ಸಮಸ್ತಮಿಷ್ಟಮನಘಂ ದೇವಾಸ್ಸದಾ ಪೂಜಿತಾಃ ॥**
**ಸಂಸಾರಾಚ್ಚ ಸಮುದ್ಧೃತಾಸ್ಸ್ವಪಿತರಃ ತ್ರೈಲೋಕ್ಯ ಪೂಜ್ಯೋಹ್ಯಸೌ ।**
**ಯಸ್ಯ ಬ್ರಹ್ಮವಿಚಾರಣೇ ಕ್ಷಣಮಿಹ ಸ್ಥೈರ್ಯಂ ಮನಃ ಪ್ರಾಪ್ನುಯಾತ್ ॥**

ಯಾವನ ಮನಸ್ಸು ಬ್ರಹ್ಮವಿಚಾರದಲ್ಲಿ ಒಂದು ಕ್ಷಣ ಸ್ಥಿರವಾಗಿ ನಿಲ್ಲುತ್ತೋ ಅವನಿಂದ ಗಂಗಾದಿ ಸಕಲ ನದಿಗಳಲ್ಲೂ ಸ್ನಾನಮಾಡಿದಂತೆ ಆಯಿತು. ಸಕಲ ಭೂಮಂಡಲವೇ ದಾನಮಾಡಿದಂತಾಯಿತು. ಸಮಸ್ತ ಯಜ್ಞಗಳೂ ಮಾಡಲ್ಪ

ಟ್ಟವು. ಸಕಲ ದೇವತೆಗಳೂ ಸರ್ವದಾ ಪೂಜಿಸಲ್ಪಟ್ಟಂತೆ ಆಗುವುದು. ಅವನ ಪಿತೃಗಳೆಲ್ಲಾ ಕೃತಾರ್ಥರಾಗುವರು. ಅವನು ಮೂರು ಲೋಕದಲ್ಲಿಯೂ ಪೂಜ್ಯನಾಗುವನೆಂದು ತಾತ್ಪರ್ಯ. ವಾಸುದೇವಮನನದಲ್ಲಿ—

**ಆತ್ಮಾನಾತ್ಮ ವಿವೇಕಂತು ಕೃತ್ವಾತಿಷ್ಠತಿಯಃಪುಮಾ್ನ್ ।**
**ಜಟೀ ಮುಂಡೀ ಶಿಖೀ ವಾಪಿ ಮುಚ್ಯತೇನಾತ್ರ ಸಂಶಯಃ ।**

ಆತ್ಮ ಅನಾತ್ಮ ವಿಚಾರವನ್ನು ಮಾಡುತ್ತಾ ಯಾವ ಮನುಷ್ಯನಿರುತ್ತಾನೋ ಅವನು ಯೋಗಿಯೇ ಆಗಲಿ, ಸನ್ಯಾಸಿಯಾಗಲಿ, ಗೃಹಸ್ಥನಾಗಲಿ ಮುಕ್ತನಾಗುವನು. ಈ ವಿಷಯವಲ್ಲಿ ಸಂಶಯವಿಲ್ಲವು. ವಿವೇಕಚೂಡಾಮಣಿಯಲ್ಲಿ—

**ಅಹಂ ಬ್ರಹ್ಮೇತಿ ವಿಜ್ಞಾನಾತ್ಕಲ್ಪಕೋಟಿ ಶತೈಃ ಕೃತಂ ।**
**ಸಂಚಿತಂ ವಿಲಯಂ ಯಾಂತಿ ಪ್ರಬೋಧಾತ್ಸ್ವಪ್ನಬೋಧವತ್ ॥**

ನಾನೇ ಬ್ರಹ್ಮನೆಂಬ ಜ್ಞಾನದಿಂದ ಕೋಟಿ ಶತಕಲ್ಪಗಳಿಂದ ಮಾಡಿದ ಪಾಪಗಳೆಲ್ಲಾ ಎಚ್ಚರವಾದಮೇಲೆ ಸ್ವಪ್ನ ವ್ರಯ ಯಾವರೀತಿ ನಾಶವಾಗುತ್ತೋ ಅದರಂತೆ ನಾಶವಾಗುವುದು. ಉತ್ತರಗೀತೆಯಲ್ಲಿ—

**ಅಹಂ ಬ್ರಹ್ಮೇತಿ ಮಾಂ ಧ್ಯಾಯೇ್ ಏಕಾಗ್ರಮನಸಾಸಕೃತ್ ।**
**ಸರ್ವಂ ತರತಿ ಪಾಪಾನಂ ಕಲ್ಪಕೋಟಿಶತೈಃ ಕೃತಂ ॥**

ನಾನೇ ಬ್ರಹ್ಮನಾದನೆಂದು ಯಾವನು ಏಕಾಗ್ರಮನಸ್ಸಿನಿಂದ ಒಂದಾವರ್ತಿ ಧ್ಯಾನಮಾಡುತ್ತಾನೋ ಅವನು ಕೋಟಿಕಲ್ಪಗಳಿಂದ ಮಾಡಿದ ಪಾಪಗಳನ್ನೆಲ್ಲಾ ದಾಟುತ್ತಾನೆ. ಕೇವಲ್ಯೋಪನಿಷತ್ತಿನಲ್ಲಿ—

**ವೇದಾಂತವಿಜ್ಞಾನಸುನಿಶ್ಚಿತಾರ್ಥಾಸ್ಸನ್ಯಾಸಯೋಗಾದ್ಯತಯಶ್ಶುದ್ಧಸತ್ವಾಃ ।**
**ತೇ ಬ್ರಹ್ಮಲೋಕೇಷು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ ॥**

ವೇದಾಂತವಿಚಾರವನ್ನು ಮಾಡುತ್ತಾ ಪೂರ್ಣನಾಗದೆ ಮಧ್ಯೆ ದೇಹ ಪತನವಾದರೆ ಆ ಮನುಷ್ಯನು ಬ್ರಹ್ಮನೊಡನೆ ಮುಕ್ತನಾಗುತ್ತಾನೆ.

ವಿದ್ಯಾರಣ್ಯಕೃತ ಪಂಚದಶಿ ಧ್ಯಾನದೀಪದಲ್ಲಿ—

**ಉಪಾಸನಂ ನಾತಿಪಕ್ವಮಿಹಯಸ್ಯ ಪರತ್ರಸಃ ।**
**ಮರಣೇ ಬ್ರಹ್ಮಲೋಕೇವಾ ತತ್ವಂ ವಿಜ್ಞಾಯ ಮುಚ್ಯತೇ ॥**

ನಿರ್ಗುಣ ಬ್ರಹ್ಮೋಪಾಸನೆಯು ಪಕ್ವವಾಗದೆ ಅರ್ಧಾಂತಿಕದಲ್ಲಿ ಮಧ್ಯೇ ಮರಣವಾದರೆ ಅವನು ಬ್ರಹ್ಮಲೋಕಕ್ಕೆ ಹೋಗಿ ಅಲ್ಲಿ ಪೂರ್ಣಜ್ಞಾನವನ್ನು ಪಡೆದು ಮುಕ್ತನಾಗುತ್ತಾನೆ. ಮತ್ತು ಬ್ರಹ್ಮಜ್ಞಾನದಲ್ಲಿ ಪರೋಕ್ಷ ಬ್ರಹ್ಮಜ್ಞಾನವೆಂತಲೂ, ಅಪರೋಕ್ಷ ಬ್ರಹ್ಮಜ್ಞಾನವೆಂತಲೂ ಎರಡು ವಿಧವು. ಸದ್ಗುರು ಮೂಲಕ

ತತ್ವೋಪದೇಶವನ್ನು ಪಡೆದು ಸಕಲ ಜಗದಧಿಷ್ಠಾನವಾದ ಬ್ರಹ್ಮವು ಒಂದಿದೆ, ಅದು ಪರಿಪೂರ್ಣವಾದದ್ದು; ಆ ಬ್ರಹ್ಮಾತಿರಿಕ್ತ ವಸ್ತುವು ಯಾವುದೂ ಇಲ್ಲ ವೆಂದು ದೃಢವಾಗಿ ತಿಳಿಯುವುದೇ ಪರೋಕ್ಷ ಬ್ರಹ್ಮಜ್ಞಾನವು. ಆ ಬ್ರಹ್ಮವೇ ನಾನು ಎಂಬುದಾಗಿ ಸಂಶಯ ಅಸಂಭಾವನೆ ವಿಪರೀತ ಭಾವನೆಗಳಿಲ್ಲದೆ ನಿಶ್ಚಯಿ ಸುವುದೇ ಅಪರೋಕ್ಷ ಬ್ರಹ್ಮಜ್ಞಾನವೆನಿಸುವುದು. ಇದರಲ್ಲಿ ಪರೋಕ್ಷ ಬ್ರಹ್ಮ ಜ್ಞಾನಕ್ಕೆ ಫಲವೇನೆಂದರೆ:—

ಪಂಚದಶೀ ಪ್ರತ್ಯಕ್ತತ್ವವಿವೇಕದಲ್ಲಿ—

**ಪರೋಕ್ಷಂ ಬ್ರಹ್ಮವಿಜ್ಞಾನಂ ಶಾಬ್ದಂ ದೇಶಿಕಪೂರ್ವಕಂ ।**
**ಬುದ್ಧಿಪೂರ್ವ ಕೃತಂ ಪಾಪಂ ಕೃತ್ಸ್ನಂ ದಹತಿ ವಹ್ನಿವತ್ ॥**

ಗುರುಮುಖವಾಗಿ ತಿಳಿದ ಪರೋಕ್ಷ ಬ್ರಹ್ಮಜ್ಞಾನವು ಬುದ್ಧಿಪೂರ್ವಕವಾಗಿ ಮಾಡಿದ ಮಹಾಪಾಪಗಳನ್ನೆಲ್ಲಾ ನಾಶಮಾಡುತ್ತದೆ. ಬುದ್ಧಿಪೂರ್ವಕವಾಗಿ ಮಾಡಿದ್ದು ಅಂದರೆ— ಈ ದುಷ್ಕಾರ್ಯ ಮಾಡಿದರೆ ಇಂಥಾ ಪಾಪ ಸಂಭವಿಸು ತ್ತೆಂಬುದನ್ನು ತಿಳಿದು ತಿಳಿದು ಮಾಡಿದ ಪಾಪಗಳು. ಇನ್ನು ಅಪರೋಕ್ಷ ಬ್ರಹ್ಮ ಜ್ಞಾನಕ್ಕೆ ಫಲವೇನೆಂದರೆ:—

**ಅಪರೋಕ್ಷಾತ್ಮವಿಜ್ಞಾನಂ ಶಾಬ್ದಂ ದೇಶಿಕಪೂರ್ವಕಂ ।**
**ಸಂಸಾರಕಾರಣಾಜ್ಞಾನತಮಸಶ್ಚಂಡಭಾಸ್ಕರಃ ॥**

ಗುರುಮುಖದಿಂದ ಲಬ್ಧವಾದ ಅಪರೋಕ್ಷ ಬ್ರಹ್ಮಜ್ಞಾನವು ಸಂಸಾರಕ್ಕೆ ಕಾರಣವಾದ ಅಜ್ಞಾನವೆಂಬ ಅಂಧಕಾರಕ್ಕೆ ಪ್ರಚಂಡಸೂರ್ಯನಂತಿರುವುದು. ಅಂದರೆ—ಜನನ ಮರಣ ದುಃಖವನ್ನು ನಾಶಮಾಡಿ ಮುಕ್ತಿಯನ್ನು ಕೊಡವು ದೆಂದು ತಾತ್ಪರ್ಯವು. ಲೋಕದಲ್ಲಿ ಯಾವ ವ್ರತ, ದಾನ, ದೇವತಾಧ್ಯಾನ, ಗಂಗಾಸ್ನಾನಾದಿ ಪುಣ್ಯಕರ್ಮಗಳನ್ನು ಅನೇಕ ಕೋಟಿ ಮಾಡಿದಾಗ್ಯೂ ತಿಳಿದು ಮಾಡಿದ ಪಾಪಗಳು ಎಂದಿಗೂ ನಾಶವಾಗಲಾರದು. ಇಂಥಾದ್ದರಲ್ಲಿ ಪರೋಕ್ಷ ಜ್ಞಾನವೇ ಬುದ್ಧಿಪೂರ್ವಕ ಪಾಪಗಳನ್ನು ನಾಶಮಾಡುವುದರಲ್ಲಿ ಈ ಬ್ರಹ್ಮವಿಚಾರ ಕ್ಕಿಂತಲೂ ಅಧಿಕವಾದ ಪುಣ್ಯಕರ್ಮವು ಯಾವುದೆಂದು ಹೇಳಬಹುದು ?

ಸೂತಸಂಹಿತೆಯಲ್ಲಿ—

**ಅಶ್ವಮೇಧ ಸಹಸ್ರಾಣಿ ವಾಜಪೇಯ ಶತಾನಿ ಚ ।**
**ಏತಸ್ಯ ಧ್ಯಾನಯೋಗಸ್ಯ ಕಳಾಂನಾರ್ಹಂತಿ ಷೋಡಶೀಂ ॥**

ಸಾವಿರ ಅಶ್ವಮೇಧ ಯಾಗಗಳೂ, ನೂರು ವಾಜಪೇಯಗಳೂ ಕೂಡ ಆ ಜೀವಬ್ರಹ್ಮೈಕ್ಯಧ್ಯಾನದ ಹದಿನಾರು ಕಳೆಗಳಲ್ಲಿ ಒಂದು ಕಳೆಗೆ ಸರಿಯಾಗಲಾರದು.

**ಕುಲಂ ಪವಿತ್ರಂ ಜನನೀ ಕೃತಾರ್ಥಾ ವಿಶ್ವಂಭರಾ ಪುಣ್ಯವತೀ ಚ ತೇನ ।**
**ಅಪಾರಸಂವಿತ್ಸುಖಸಾಗರೇಸ್ಮಿನ್ ಲೀನಂ ಪರಬ್ರಹ್ಮಣಿಯಸ್ಯ ಚೇತಃ ॥**

ಯಾವನ ಮನವು ಪರಬ್ರಹ್ಮದಲ್ಲಿ ಲೀನವಾಗಿದೆಯೋ ಅವನ ಕುಲ ಪವಿತ್ರವು, ಅವನ ತಾಯಿ ಕೃತಾರ್ಥಳು, ಅವನಿಂದ ಭೂಮಿಯು ಪುಣ್ಯವತಿಯು ಎಂದು ಹೇಳಿದೆ. ಯಮಗೀತೆಯಲ್ಲಿ—

**ಕಿಂ ತಸ್ಯ ದಾನೈಸ್ತಪಸಾ ಚ ತೀರ್ಥೈಃ ಕಿಮಧ್ವರೈಃ ಕಿಂ ಸುರತರ್ಪಣೇನ ।**
**ಜೀವೇಶ್ವರಾಭೇದ ವಿಚಾರಸಿಂಧೌ ನಿಮಜ್ಯನೋ ತಿಷ್ಠತಿ ಯಸ್ಯ ಚೇತಃ॥**

ಯಾವನ ಮನಸ್ಸು ಜೀವೇಶ್ವರರಿಗೆ ಭೇದವಿಲ್ಲವೆಂಬ ವಿಚಾರಸಮುದ್ರದಲ್ಲಿ ಮುಳುಗಿ ಮೇಲಕ್ಕೆ ಏಳದೆ ಇದೆಯೋ ಅವನಿಗೆ ದಾನ ತಪಸ್ಸು ತೀರ್ಥಯಾತ್ರಾ ಯಜ್ಞ ದೇವಪೂಜಾದಿಗಳಿಂದ ಏನು ಪ್ರಯೋಜನ? ಅಂದರೆ ಲೋಕದಲ್ಲಿ ಯಜ್ಞದಾನಾದ್ಯುತ್ತಮ ಕರ್ಮಂಗಳನ್ನು ಪುಣ್ಯಬರುವುದಕ್ಕೆ ಮಾಡುತ್ತಾರೆ. ಇಂಥಾ ಕರ್ಮಗಳು ಕೋಟಿಮಾಡಿದಾಗ್ಯೂ ಲಭ್ಯವಾಗದ ಮಹಾ ಫಲವೇ ಉಂಟಾಗುವಲ್ಲಿ ಇವೆಲ್ಲಾ ಯಾತಕ್ಕೆಂದು ಯಮನು ಹೇಳುತ್ತಾನೆ.

ಆತ್ಮಗೀತೆಯೆಂಬ ಗ್ರಂಥದಲ್ಲಿ—

**ಆತ್ಮನಾತ್ಮವಿಚಾರೇತು ಯಚ್ಚಿತ್ತಂ ರಮತೇ ಸದಾ ।**
**ಕೃತಾನಿತೇನ ಸತತಂ ಪುಣ್ಯಕರ್ಮಾಣಿ ಭೂರಿಶಃ ॥**

ಯಾವನ ಮನಸ್ಸು ಆತ್ಮಾನಾತ್ಮ ವಿಚಾರದಲ್ಲಿ ರಮಿಸುತ್ತಿದೆಯೋ ಅವನಿಂದ ಸರ್ವದಾ ಅನೇಕ ಪುಣ್ಯಕರ್ಮಗಳು ಮಾಡಲ್ಪಟ್ಟವು.

ಭಾಗವತ ಏಕಾದಶಸ್ಕಂದದಲ್ಲಿ ಕೃಷ್ಣನು ಹೇಳುತ್ತಾನೆ—

**ಅನಪೇಕ್ಷಂ ಮುನಿಂ ಶಾಂತಂ ನಿರ್ವೈರಂ ಸಮದರ್ಶಿನಂ ।**
**ಅನುವ್ರಜಾಮ್ಯಹಂ ನಿತ್ಯಂ ಪೂತಯನ್ನಂಘ್ರಿರೇಣುಭಿಃ ॥**

ಅಪೇಕ್ಷಾಶೂನ್ಯನಾಗಿ, ಮನನಶೀಲನಾಗಿ, ಶಾಂತನಾಗಿ, ಕಾಮಕ್ರೋಧ ರಹಿತನಾಗಿ ಸಮಭಾವನೆಯುಳ್ಳ ಮಹಾತ್ಮನನ್ನು ಅವನ ಪಾದಧೂಳಿಯಿಂದ ಪವಿತ್ರಗೊಳಿಸುವನಾಗಿ ಅನುಸರಿಸಿ ತಿರುಗುತ್ತೇನೆ.

ಶಿವಗೀತೆಯ ೧೬ನೇ ಅಧ್ಯಾಯದಲ್ಲಿ—

**ಸಂಸಾರಾನ್ಮುಚ್ಯತೇ ಜಂತುಃ ಶಿವತಾದಾತ್ಮ್ಯಭಾವನಾತ್ ।**
**ತಥಾ ಧ್ಯಾನಂ ತಪೋ ವೇದಾಧ್ಯಯನಂ ವಾನ್ಯಕರ್ಮವಾ ॥**
**ಸಹಸ್ರಾಂಶಂತು ನಾರ್ಹಂತಿ ಸರ್ವಥಾ ಧ್ಯಾನ ಕರ್ಮಣಃ ।**
**ಜಾತಿಮಾಶ್ರಮಮಂಗಾನಿ ದೇಶಂ ಕಾಲಮಥಾಪಿವಾ ॥**

**ಆಸನಾದೀನಿ ಕರ್ಮಾಣಿ ಧ್ಯಾನಂ ನಾಪೇಕ್ಷತೇ ಕ್ವಚಿತ್ ।**
**ಪಾತಕೇನಾಪಿವಾಯುಕ್ತೋ ಧ್ಯಾನಾದೇವವಿಮುಚ್ಯತೇ ॥**
**ವಿಶ್ವಂ ಶಿವಮಯಂ ಯಸ್ತು ಪಶ್ಯತ್ಯಾತ್ಮಾನಮಾತ್ಮನಾ ।**
**ತಸ್ಯಕ್ಷೇತ್ರೇಷು ತೀರ್ಥೇಷು ಕಿಂ ಕಾರ್ಯಂ ವಾನ್ಯ ಕರ್ಮಸು ॥**
**ಆತ್ಮಪೂಜಾ ಸೂವನಾಸ್ತಿ ಪೂಜಾ ರಘುಕುಲೋತ್ತಮ ।**
**ಮತ್ಸಾಯುಜ್ಯಮವಾಪ್ನೋತಿ ಚಂಡಾಲೋಪ್ಯಾತ್ಮಪೂಜಯಾ ॥**

ಮನುಷ್ಯನು "ಆ ಪರಶಿವನೇ ನಾನು'' ಎಂಬ ಐಕ್ಯಭಾವದಿಂದ ಮುಕ್ತನಾಗುತ್ತಾನೆ. ತಪಸ್ಸು, ಯಜ್ಞ, ದಾನ, ವೇದಾಧ್ಯಯನ, ಅನ್ಯಕರ್ಮಗಳು ಯಾವುದೂ ಈ ಜೀವಬ್ರಹ್ಮೈಕ್ಯ ಧ್ಯಾನಕರ್ಮದ ಸಹಸ್ರಾಂಶದಲ್ಲಿ ಒಂದಂಶವನ್ನೂ ಸರಿಹೋಲಲಾರದು. ಈ ಜೀವಬ್ರಹ್ಮೈಕ್ಯ ಧ್ಯಾನಕ್ಕೆ ಜಾತಿ, ಆಶ್ರಮ, ಅಂಗ, ದೇಶ, ಕಾಲ, ಆಸನಾದಿ ಕರ್ಮಗಳು ಯಾವುದೂ ಬೇಕಿಲ್ಲ. ಪಾಪಗಳಿಂದ ಕೂಡಿದವನಾದರೂ ಈ ಐಕ್ಯಜ್ಞಾನದಿಂದಲೇ ಮುಕ್ತನಾಗುತ್ತಾನೆ. ಈ ಪ್ರಪಂಚವೆಲ್ಲಾ ಶಿವಸ್ವರೂಪವೆಂದು ಯಾವನು ತಿಳಿಯುವನೋ ಅವನಿಗೆ ತೀರ್ಥ ಕ್ಷೇತ್ರ ಇತರ ಕರ್ಮಗಳಲ್ಲಿ ಏನು ಕೆಲಸ ? ಎಲೈ ರಾಮನೇ ! ಲೋಕದಲ್ಲಿ ಆತ್ಮಪೂಜೆಗೆ ಸಮಾನವಾದ ಪೂಜೆಯೇ ಇಲ್ಲ. ಈ ಆತ್ಮಪೂಜೆಯಿಂದ ಚಂಡಾಲನಾದಾಗ್ಯೂ ನನ್ನ ಸಾಯುಜ್ಯವನ್ನು ಹೊಂದುತ್ತಾನೆ. ಮತ್ತು ಇದೇ ಶಿವಗೀತಾ ಸಪ್ತಮಾಧ್ಯಾಯದಲ್ಲಿ ಶಿವನನ್ನು ಕುರಿತು ರಾಮನು ಹೇಳುತ್ತಾನೆ.

**ಅಜ್ಞಾನ ಮೂಢಾ ಮುನಯೋ ವದಂತಿ ಪೂಜೋಪಚಾರಾದಿ ಬಹಿಃಕ್ರಿಯಾಭಿಃ।**
**ತೋಷಂ ಗಿರೀಶೋ ಭಜತೀತ್ಯ ವಿದ್ಯಾ ಕುತಸ್ತ್ವಮೂರ್ತ್ತಸ್ಯತುಭೋಗಲಿಪ್ಸಾ॥**

ಎಲೈ ಶಿವನೇ ! ಜ್ಞಾನಶೂನ್ಯರಾಗಿ ಮೂಢರಾದ ಕೆಲ ಮುನಿಗಳು ಪೂಜೆ ಅಭಿಷೇಕ ಉಪಚಾರಾದಿ ಬಾಹ್ಯಕರ್ಮಗಳಿಂದ ಶಿವನು ತೃಪ್ತಿಯನ್ನು ಪಡೆಯುತ್ತಾನೆಂದು ಹೇಳುತ್ತಾರೆ. ಇದೆಲ್ಲಾ ಅವಿದ್ಯಾಮಹಿಮೆಯು. ಅಖಂಡವಸ್ತುವಾದ ನಿನಗೆ ಭೋಗಾಪೇಕ್ಷೆಯುಂಟೇ ?

**ಕಿಂಚಿದ್ದಳಂ ವಾಚುಳಕೋದಕಂ ವಾ ಯಸ್ತ್ವಂ ಮಹೇಶಪ್ರತಿಗೃಹ್ಯಧತ್ಸೇ ।**
**ತ್ರೈಲೋಕ್ಯಲಕ್ಷ್ಮೀಮಪಿ ಯಜ್ಜ್ನ ನೇಭ್ಯಸ್ಸರ್ವಂತ್ಯವಿದ್ಯಾಕೃತಮೇವಮನ್ಯೇ ॥**

ಎಲೈ ಶಿವನೇ ! ಒಂದು ಬಿಲ್ವವನ್ನಾಗಲೀ, ಒಂದು ಉದ್ಧರಣೆ ನೀರನ್ನೇ ಆಗಲಿ ನಿನಗೆ ಕೊಟ್ಟರೆ ಅದನ್ನು ನೀನು ತೆಗೆದುಕೊಂಡು ಅದನ್ನು ಕೊಟ್ಟ ಜನಗಳಿಗೆ ಮೂರು ಲೋಕದ ಲಕ್ಷ್ಮಿಯನ್ನು ಕೊಡುತ್ತೀಯೆ ಎಂದು ಹೇಳುವುದೆಲ್ಲಾ ಅವಿದ್ಯಾಕಾರ್ಯವೆಂದು ತಿಳಿದೆನು.

**ವ್ಯಾಪ್ನೋಷಿಸರ್ವಾವಿದಿಶೋದಿಶಶ್ಚತ್ವಂ ವಿಶ್ವಮೇಕಃ ಪುರುಷಃ ಪುರಾಣಃ |**
**ನಷ್ಟೇ ಪಿತಸ್ಮಿರ್ ತವನಾಸ್ತಿ ಹಾನಿಃ ಘಟೇ ವಿನಷ್ಟೇ ನಭಸೋ ಯಥೈವ ||**

ಎಲೈ ಶಿವನೇ ! ನೀನು ಸಕಲ ಪ್ರಪಂಚವನ್ನೂ, ಎಲ್ಲಾ ದಿಕ್ಕುಗಳನ್ನೂ, ವಿದಿಕ್ಕುಗಳನ್ನೂ ವ್ಯಾಪಿಸಿಕೊಂಡಿರುವೆ. ನೀನು ಪುರಾಣನು, ಅದ್ವಿತೀಯನು. ಘಟ ನಾಶವಾದರೂ ಅದರೊಳಗಿರುವ ಆಕಾಶವು ಹೇಗೆ ನಾಶವಾಗದೋ ಅದರಂತೆ ದೇಹ ನಾಶವಾದರೂ ನೀನು ನಾಶವಾಗದಿರುವೆ.

**ಯಥೈಕಮಾಕಾಶಗಮರ್ಕಬಿಂಬಂ ಕ್ಷುದ್ರೇಷು ಪಾತ್ರೇಷು ಜಲಾನ್ವಿತೇಷು |**
**ಭಜತ್ಯನೇಕ ಪ್ರತಿಬಿಂಬಭಾವಂ ತಥಾತ್ವಮಂತಃ ಕರಣೇಷು ದೇವ ||**

ಹೇಗೆ ಒಂದೇ ಆಗಿರುವ ಸೂರ್ಯಬಿಂಬವು ಜಲದಿಂದ ತುಂಬಿರುವ ಪಾತ್ರೆಗಳಲ್ಲಿ ಅನೇಕ ಪ್ರತಿಬಿಂಬಭಾವವನ್ನು ಹೊಂದುವುದೋ ಅದರಂತೆ ನೀನು ಒಬ್ಬನೇ ಆಗಿ ಅನೇಕ ದೇಹಗಳಲ್ಲಿರುವ ಅಂತಃಕರಣದಲ್ಲಿ ಪ್ರತಿಬಿಂಬಿಸಿ ಜೀವಸ್ವರೂಪನಾಗಿರುವೆ. ಮತ್ತು ( ಅದ್ವೈತಸುಧಾರಸಪ್ರಕರಣ ) ವೆಂಬ ಗ್ರಂಥದಲ್ಲಿ ಹೇಳಿರುವುದೇನೆಂದರೆ—

**ಭಜಂತು ರುದ್ರಂ ಕತಿಚಿದ್ಧರಿಂವಾ ಬ್ರಹ್ಮಾಣಮೀಶಂ ಕತಿಚಿತ್ಸುರೇಂದ್ರಾನ್ |**
**ವಯಂ ಭಜಾಮಃ ಪರಜೀವರೂಪ ಮಾತ್ಮಾನಮಾಧಾರಮಖಂಡ ರೂಪಂ ||**

ಕೆಲವರು ರುದ್ರನನ್ನೂ, ಕೆಲವರು ಹರಿಯನ್ನೂ, ಕೆಲವರು ಬ್ರಹ್ಮನನ್ನೂ, ಕೆಲವರು ಈಶ್ವರನನ್ನೂ, ಕೆಲವರು ದೇವೇಶ್ವರನನ್ನೂ ಭಜಿಸಲಿ. ನಾವಾದರೂ ಶಿವಜೀವಸ್ವರೂಪವಾಗಿಯೂ, ಸರ್ವಾಧಾರವಾಗಿಯೂ, ಅಖಂಡರೂಪವಾಗಿಯೂ ಇರುವ ವಸ್ತುವನ್ನು ಭಜಿಸುವೆವು.

**ಭಜಂತುಕೇ ಚಿದ್ಧನಿನಶ್ಚ ರಾಜ್ಞೋ ಭಜಂತುಕೇ ಚಿದ್ವಿದುಷಶ್ಚ ದೇವಾನ್ |**
**ಶುದ್ಧಾವಿಮುಕ್ತಾಸುಖಚಿತ್ಸ್ವರೂಪಾ ಸತ್ವಾವಯಂ ಕಸ್ಯ ಕೃತೇಭಜಾಮಃ |**

ಕೆಲವರು ಧನಿಕರನ್ನೂ ರಾಜನನ್ನೂ ಭಜಿಸಲಿ, ಕೆಲವರು ವಿದ್ವಾಂಸರನ್ನೂ ದೇವತೆಗಳನ್ನೂ ಭಜಿಸಲಿ, ಶುದ್ಧ ಮುಕ್ತಸುಖಚಿತ್ಸ್ವರೂಪರಾದ ನಾವು ಯಾರಿಗೋಸ್ಕರ ನಮಸ್ಕರಿಸೋಣ.

**ಯೂಯಂ ಭಜಧ್ವಂಶಿವಮೀಶ್ವರಂವಾ ಹರಿಂವಿಧಿಂ ವಾಸಕಲಾನ್ ಸುರೇದ್ರಾನ್|**
**ಸರ್ವಾತ್ಮರೂಪಾವಯಮನ್ಯಹೀನಾಃ ಸಂತಃಕುತೋಸ್ಮಾದಪರಾನ್ ಭಜಾಮಃ ||**

ನೀವು ಬೇಕಾದರೆ ಶಿವ ಈಶ್ವರ ವಿಷ್ಣು ಬ್ರಹ್ಮ ಸುರೇಶ್ವರರನ್ನು ಭಜಿಸಿರಿ. ಇತರ ವಸ್ತುಶೂನ್ಯರಾಗಿಯೂ ಸರ್ವಾತ್ಮಸ್ವರೂಪರಾಗಿಯೂ ಇರುವ ನಾವು ನಿಮಗಿಂತಲೂ ಅನ್ಯವಾದ ಯಾವ ವಸ್ತುವನ್ನು ಭಜಿಸೋಣ.

**ಭಜಂತು ದೇಹಾತ್ಮಧಿಯೋತ್ರಕೇಚಿತ್ ಭಜಂತು ಕರ್ತ್ರಾತ್ಮಧಿಯಃಪರೇವಾ।**
**ವಯಂಹಿಧನ್ಯಾ ಪರಜೀವರೂಪಾಃ ವಯಂ ಭಜಾಮುಸ್ಸುಖಚಿತ್ಸ್ವರೂಪಂ ॥**

"ದೇಹವೇ ನಾನು" ಎಂಬ ಜಾನವುಳ್ಳವರು ದೇವರನ್ನು ಭಜಿಸಲಿ; ನಾನು ಕರ್ತನು ಎಂಬ ಜ್ಞಾನವುಳ್ಳವರೂ ಭಜಿಸಬಹುದು. ಶಿವಜೀವ ಸ್ವರೂಪರಾದ ನಾವು ಸುಖಚಿತ್ಸ್ವರೂಪವನ್ನೇ ಭಜಿಸುತ್ತೇವೆ.

ಆತ್ಮತತ್ವರುಬೋಧಿನಿಯೆಂಬ ಗ್ರಂಥದಲ್ಲಿ—

**ಭಕ್ತ್ತೋಜಟೀವಾ ಯತಿರೀಶ್ವರೋವಾ ವಿದ್ವಾನ್ದ್ವಿಜೋವಾ ಕುಲವಾನ್ವಿವಸ್ತ್ರಃ**
**ಶೈವೋಪರೋವಾ ಧೃತಶಂಖಚಕ್ರೋಜ್ಞಾನಂ ವಿನಾ ಕುತ್ರಗತಿಸ್ತ್ವಮೀಷಾಂ॥**

ಭಕ್ತನಾಗಲಿ, ಯೋಗಿಯಾಗಲಿ, ಯತಿರಾಜ, ವಿದ್ವಾಂಸ, ಬ್ರಾಹ್ಮಣ, ಸತ್ಕುಲವಂತ, ದಿಗಂಬರ ಶೈವ, ವೈಷ್ಣವ, ಮುಂತಾದವರು ಯಾರೇ ಆಗಲಿ ಇವರಿಗೆ ಜ್ಞಾನವಿಲ್ಲದಮೇಲೆ ಗತಿಯೆಲ್ಲಿಯದು ?

**ಸ್ನಾನೇನ ಶುದ್ಧೋ ನಹಿ ಕಾಕಸಂಘೋ ಭೂತ್ಯಾಖರೋಯಂ**
**ನತು ಶಂಭುಭಕ್ತಃ। ಧ್ಯಾನೇನಪೂತೋ ನಭವೇತ್ ಬಕೋಯಂ**
**ನಕರ್ಮಣಾ ಮೂಢಜನೋ ವಿಮುಕ್ತಃ ॥**

ಕಾಗೆಯು ಸ್ನಾನಮಾಡೋಣದರಿಂದ ಶುದ್ಧಿಯಾಗುವುದಿಲ್ಲ. ಬೂದಿಯನ್ನು ಹಚ್ಚಿಕೊಳ್ಳುವುದರಿಂದ ಕತ್ತೆಯು ಶಿವಭಕ್ತನಾಗಲಾರದು. ಧ್ಯಾನ ಮಾಡುವುದರಿಂದ ಬಕವು ಪವಿತ್ರವಾಗಲಾರದು. ಇದರಂತೆ ಮೂಢನು ಕರ್ಮದಿಂದ ಮುಕ್ತನಾಗಲಾರನು. ಈ ರೀತಿ ಬ್ರಹ್ಮವಿಚಾರದಿಂದುಂಟಾಗುವ ಫಲವನ್ನು (ಚಿತ್ಸುಖೀನೈಷ್ಕರ್ಮ ಸಿದ್ಧಿಋಭುಗೀತಾ) ಮುಂತಾದ ಗ್ರಂಥಗಳಲ್ಲಿ ಅನೇಕ ವಿಧವಾಗಿ ಹೇಳಿರುತ್ತೆ. ಆದ್ದರಿಂದ ಬ್ರಹ್ಮವಿಚಾರದಲ್ಲಿರುವ ಪುರುಷನಿಗೆ ಎಂದಿಗೂ ಚ್ಯುತಿಯಿಲ್ಲ. ಮತ್ತು ಒಂದು ಮುಹೂರ್ತ ಬ್ರಹ್ಮವಿಚಾರ ಮಾಡಿದರೆ ಎಂಭತ್ತು ಕೃಚ್ಛ್ರಮಾಡಿದ ಫಲವು ಬರುತ್ತೆಂದು ಕರ್ಮವನ್ನು ಹೇಳುವ ಧರ್ಮಶಾಸ್ತ್ರದಲ್ಲೇ ಹೇಳುತ್ತೆ. ಮತ್ತು ಈ ವಿಷಯದಲ್ಲಿ ಮತ್ತೊಂದು ಸಮಾಧಾನವುಂಟು. ಏನಂದರೆ:—

**ಕೋಟಯೋ ಬ್ರಹ್ಮಹತ್ಯಾನಾಮುಗಮ್ಯಾಗಮಕೋಟಯಃ।**
**ಸದ್ಯಃಪ್ರಳಯಮಾಯಾಂತಿ ಮಹಾದೇವೇತಿ ಕೀರ್ತನಾತ್ ॥**
**ಅನನ್ಯಾಶ್ಚಿಂತಯಂ ತೋಮಾಂ ಯಜನಾಃ ಪರ್ಯುಪಾಸತೇ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥**
**ಅಪಿಚೇತ್ಸುದುರಾಚಾರೋ ಭಜತೇಮಾಮನನ್ಯಭಾಕ್।**
**ಸಾಧುರೇವಸಮಂತವ್ಯಸ್ಸಮ್ಯಗ್ವ್ಯವಹಿತೋಹಿಸಃ ॥**

ಕೋಟಿ ಬ್ರಹ್ಮಹತ್ಯೆಗಳನ್ನು ಮಾಡಿದರೂ ಕೋಟಿ ಅಗಮ್ಯಾಗಮನಗಳನ್ನು ಮಾಡಿದರೂ ಇವೆಲ್ಲಾ ಮಹಾದೇವಯೆಂಬ ಸ್ಮರಣದಿಂದ ತತ್‌ಕ್ಷಣವೆ ನಾಶವಾಗುವುದೆಂದು ಶಿವರಹಸ್ಯದಲ್ಲಿ ಹೇಳಿದೆ. ಇತರ ಚಿಂತೆಯನ್ನು ಮಾಡದೆ ನನ್ನ ಚಿಂತೆಯನ್ನು ಮಾಡುವವನ ಯೋಗಕ್ಷೇಮವನ್ನು ನಾನು ವಹಿಸುತ್ತೇನೆಂದೂ, ಎಂಥಾ ದುರಾಚಾರನಾದಾಗ್ಯೂ ಅನ್ಯಭಾವನೆಯನ್ನು ಬಿಟ್ಟು ನನ್ನನ್ನು ಯಾವನು ಭಜಿಸುವನೋ ಅವನು ಮಹಾಪುರುಷನೆಂದು ಭಾವಿಸಬೇಕು. ಅವನು ಸರ್ವಕ್ಕೂ ಯೋಗ್ಯನೆಂದು ಭಗವಂತನು ಗೀತೆಯಲ್ಲಿ ಹೇಳಿರುತ್ತಾನೆ. ಇದಲ್ಲದೆ ಮಹಾಪಾಪಗಳನ್ನು ಮಾಡಿದವನಾದರೂ ಭಗವಧ್ಯಾನದಿಂದ ಕೃತಕೃತ್ಯನಾಗುತ್ತಾನೆಂದು ಸರ್ವರೂ ಒಪ್ಪುತ್ತಾರೆ. ಇದರಲ್ಲಿ ಕರ್ಮಿಯೂ (ಕೈಲಾಸವಾಸ, ಪಾರ್ವತೀರಮಣ, ಭಕ್ತಪ್ರಿಯ, ರಾಕ್ಷಸಾಂತಕ, ಮಹಾನಟ, ಗಜಚರ್ಮಧರ, ನಾಗಾಭರಣ) ಎಂದು ಈ ರೀತಿ ಧ್ಯಾನಿಸುತ್ತಾನೆ. ಜ್ಞಾನಿಯಾದರೊ (ಪರಿಪೂರ್ಣ, ನಿರ್ಮೋಹ, ನಿರ್ವಿಕಲ್ಪ, ಸರ್ವಾತ್ಮಕ, ನಿರ್ಗುಣ, ನಿರಾಲಂಬ ಸ್ವಯಂಜ್ಯೋತಿ) ಎಂದು ಧ್ಯಾನಿಸುತ್ತಾನೆ. ಇದರಲ್ಲಿ ಕರ್ಮಿಯ ಧ್ಯಾನದಲ್ಲಿ—ಕೈಲಾಸವಾಸ ಎಂಬಲ್ಲಿ ಕೈಲಾಸದಲ್ಲಿ ಮಾತ್ರ ಇದ್ದಾನೆಂದು ಖಂಡತ್ವವನ್ನೂ, ಪಾರ್ವತೀರಮಣ ಎಂಬಲ್ಲಿ ಪಾರ್ವತಿಯನ್ನು ರಮಿಸುವನೆಂದು ಮೋಹವನ್ನೂ, ಭಕ್ತಪ್ರಿಯ ಎಂಬಲ್ಲಿ ಭಕ್ತರಲ್ಲಿ ಮಾತ್ರ ಪ್ರೀತಿ ಉಳ್ಳವನೆಂದು ಪಕ್ಷಪಾತವನ್ನೂ, ರಾಕ್ಷಸಾಂತಕ ಎಂಬಲ್ಲಿ ದ್ವೇಷವನ್ನೂ, ಮಹಾನಟ ಎಂಬಲ್ಲಿ ಕುಣಿಯುವುದು ಮೊದಲಾದ ಕರ್ಮಗಳನ್ನೂ ಗಜಚರ್ಮಧರ ಎಂಬಲ್ಲಿ ಶೀತ ನಿವಾರಣ ಮಾನರಕ್ಷಣಾರ್ಥಕ್ಕಾಗಿ ಬಟ್ಟೆ ಹೊದಿಯುವನೆಂಬುದೂ ರೂಢಿಯಷ್ಟೆ? ಇದರಿಂದ ಮನುಷ್ಯರ ನಡವಳಿಕೆಯನ್ನೂ, ನಾಗಾಭರಣ ಎಂಬಲ್ಲಿ ಅಲಂಕಾರದಲ್ಲಿ ಅಪೇಕ್ಷೆಯುಳ್ಳವನೆಂಬುದನ್ನೂ ಶಿವನಲ್ಲಿ ಕಲ್ಪಿಸಿದಂತಾಯಿತು. ಜ್ಞಾನಿಯ ಧ್ಯಾನದಲ್ಲಿ ಪರಿಪೂರ್ಣ ಅಂದರೆ—ಇಲ್ಲುಂಟು ಅಲ್ಲಿಲ್ಲವೆಂಬ ಭಾವನೆಯಿಲ್ಲದವನು, ನಿರ್ಮೋಹ ಅಂದರೆ ಕಾಮಾದಿ ವಿಕಾರ ಶೂನ್ಯನು, ಸರ್ವಾತ್ಮಕ ಎಂಬಲ್ಲಿ ಎಲ್ಲವೂ ನೀನೇ ಆಗಿರಲು ನಿನಗೆ ದ್ವೇಷಿಗಳಾರು ಎಂಬ ಭಾವವನ್ನು, ನಿರ್ಗುಣ ಅಂದರೆ ನರ್ತನ ಶಯನ ಭೋಜನಾದಿಗಳೇನೂ ಇಲ್ಲದ ನಿರ್ವಿಕಾರಿಯೆಂತಲೂ, ನಿರಾಲಂಬ ಎಂಬಲ್ಲಿ ವಸ್ತ್ರಾದಿಗಳನ್ನುಡುವುದಕ್ಕಾಸ್ಪದವಿಲ್ಲದವನೆಂತಲು, ಸ್ವಯಂಜ್ಯೋತಿ ಅಂಬಲ್ಲಿ ಇತರ ಆಭರಣಗಳಿಂದ ನೀನು ಬೆಳಗಬೇಕಾದ್ದಿಲ್ಲ; ನೀನೇ ಜ್ಯೋತಿ ಸ್ವರೂಪನೆಂದು ಹೇಳಿದಂತಾಯಿತು. ಈ ಉಭಯ ಧ್ಯಾನದಲ್ಲಿ ಈಶ್ವರನಲ್ಲಿ ಗೌರವವನ್ನು ಕಲ್ಪಿಸುವ ಧ್ಯಾನವಾವುದು? ಈಶ್ವರನು ತೃಪ್ತಿಹೊಂದುವ ಧ್ಯಾನವು

ಯಾವುದೋ ಅದನ್ನು ಪಂಡಿತರೇ ಯೋಚಿಸಬೇಕು. ಮನುಷ್ಯನು ಅಗೌರವ ಧ್ಯಾನದಿಂದಲೇ ಕೃತಕೃತ್ಯನಾಗುವಲ್ಲಿ ಗೌರವಧ್ಯಾನದಿಂದ ಇನ್ನಾವ ಫಲವುಂಟಾಗ ಬಹುದು. ಕರ್ಮಿಯ ಧ್ಯಾನ ಸಗುಣ ; ಜ್ಞಾನಿಯ ಧ್ಯಾನ ನಿರ್ಗುಣ ; ಗೋಪೀ ವಸ್ತ್ರಾಪಹಾರಕ, ನವನೀತಚೋರ, ಜಾರಶಿಖಾಮಣಿ, ಗೋಪೀಮಾನಭಂಗ ಎಂದು ಈ ರೀತಿ ಧ್ಯಾನವನ್ನು ಜ್ಞಾನವಿಲ್ಲದ ಪಶುಸಮಾನನು ಮಾಡಬೇಕು. ಆನರೆ ಕೃಷ್ಣಾಷ್ಟೋತ್ತರಾದಿಗಳಲ್ಲಿ ಹೇಳಿದೆಯಲ್ಲ ಅಂದರೆ (ಉಪವಾಸಾದ್ವರಂ ಭಿಕ್ಷಾ) ಎಂಬ ನ್ಯಾಯವುಂಟು. ಅಂದರೆ ಉಪವಾಸದಿಂದ ಸಾಯುವ ಕಡೆಯಲ್ಲಿ ತಿರಕೊಂಡು ತಿನ್ನುವದು ಎಂಬ ಗಾದೆಯಂತೆ ವಾದ, ದ್ಯೂತ, ಚೌರ್ಯ, ಜಾರತ್ವ, ದುರ್ವ್ಯವಹಾರದಲ್ಲಿ ಕಾಲವಂ ಕಳೆಯುವುದಕ್ಕಿಂತಲೂ ಈರೀತಿ ಧ್ಯಾನ ಮಾಡು ತ್ತಿರಲಿ ಎಂದು ಹೇಳಿದ್ದೇ ವಿನಹ ವಿಚಾರಿಯು ಈ ರೀತಿ ಧ್ಯಾನಮಾಡಕೂಡದು. ಏಕೆಂದರೆ ಪರಮಾತ್ಮನು ನಿರಾಕಾರನು, ನಿಷ್ಕ್ರಿಯನು, ನಿರಾಮಯನು, ನಿರಂ ಜನನು, ಅದ್ವಿತೀಯನು, ಪರಿಪೂರ್ಣನು, ಸ್ವಯಂಜ್ಯೋತಿ, ದೇಶಪರಿಚ್ಛೇದ ಕಾಲಪರಿಚ್ಛೇದ ವಸ್ತುಪರಿಚ್ಛೇದ ಶೂನ್ಯನು, ಈ ಜಗತ್ತೆಲ್ಲ ಪರಮಾತ್ಮಸ್ವರೂಪವೇ, ಆತ್ಮನನ್ನು ಬಿಟ್ಟಿರುವ ವಸ್ತುವೇ ಇಲ್ಲ, ಈ ವಿಷಯದಲ್ಲಿ ಪ್ರಮಾಣವೇನೆಂದರೆ:—ಶ್ರುತಿಗಳಲ್ಲಿ—

**(ಐತದಾತ್ಮ್ಯಮಿದಗ್ಂಸರ್ವಂ ತತ್ಸತ್ಯಂ ಸ ಆತ್ಮಾ ತತ್ವಮಸಿ ಶ್ವೇತಕೇತೊ)**

ಈ ಜಗತ್ತೆಲ್ಲಾ ಈ ಆತ್ಮವೇನೆ. ಅದು ಸತ್ಯ, ಅದೇ ಆತ್ಮಾ. ಎಲೈ ಶ್ವೇತ ಕೇತುವೆ ಆ ಆತ್ಮವೇ ನೀನಾದೆ. (ನೇಹನಾ ನಾಸ್ತಿ ಕಿಂಚನ) ಇಲ್ಲಿ ಸ್ವಲ್ಪವೂ ನಾನಾಭೇದವಿಲ್ಲ. (ಆತ್ಮೈವೇದತ್ಂ ಸರ್ವಂ) ಈ ಜಗತ್ತೆಲ್ಲಾ ಆತ್ಮವೇನೇ. (ನಾನಾ ಪಶ್ಯ ಮೃತ್ಯುಂ ಗಚ್ಛತಿ) ಭೇದವಾಗಿ ನೋಡತಕ್ಕವನು ಮೃತ್ಯುವನ್ನು ಹೊಂದುತ್ತಾನೆ. (ನಾತ್ರಕಾಚನಭಿದಾಸ್ತಿ) ಇಲ್ಲಿ ಯಾವ ಭೇದವೂ ಇಲ್ಲ. (ಮೃತ್ಯೋಸ್ಸಮೃತ್ಯುಮಾಪ್ನೋತಿಯ ಇಹನಾನ್ಯೈವಪಶ್ಯತಿ) ಈ ಅಖಂಡ ಸಚ್ಚಿದಾ ನಂದ ರಸದಲ್ಲಿ ಯಾವನು ಭೇದವನ್ನು ಎಣಿಸುವನೋ ಅವನು ಮೃತ್ಯುವಿಗಿಂತಲೂ ಮೃತ್ಯುವನ್ನು ಹೊಂದುತ್ತಾನೆ. ಅಂದರೆ ಬಾರಿಬಾರಿಗೂ ಸಾಯುವನು. (ಮಾಯಾ ಮಾತ್ರಮಿದಂ ದ್ವೈತ ಮದ್ವೈತಂ ಪರಮಾರ್ಥತಃ) ಜೀವಪರಮಾತ್ಮರ ಭೇದವೆಂ ಬುದು ಮಾಯಾಮಾತ್ರವು. ಅದ್ವೈತವೇ ಪರಮಾರ್ಥವು. (ಶಶಶೃಂಗೇಣ ನಾಗೇಂ ದ್ರೋ ಹತಶ್ಚೇದಸ್ತ್ಯಿದಂ ಜಗತ್) ಮೊದಲ ಕೊಂಬಿನಿಂದ ಆನೆಯು ಸಂಹರಿ ಸಲ್ಪಟ್ಟರೆ ಈ ಜಗತ್ತು ಸತ್ಯವಾದೀತು. (ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾ ಯಣಸ್ಥಿತಃ) ಒಳಹೊರಗೆಲ್ಲಾ ನಾರಾಯಣನು ವ್ಯಾಪಿಸಿಕೊಂಡು ಇದ್ದಾನೆ.

ನಾರಾಯಣೋಪನಿಷತ್ತಿನಲ್ಲಿ—

**ಶಿವಶ್ಚ ನಾರಾಯಣಃ ವಿಷ್ಣುಶ್ಚ ನಾರಾಯಣಃ ।**
**ಬ್ರಹ್ಮಾಚ ನಾರಾಯಣಃ ಶಕ್ರಶ್ಚ ನಾರಾಯಣಃ ಸರ್ವಂ ನಾರಾಯಣಃ॥**

ಶಿವನು ನಾರಾಯಣನೇ, ಬ್ರಹ್ಮನು ನಾರಾಯಣನೇ, ವಿಷ್ಣುವು ನಾರಾಯಣನೇ, ಇಂದ್ರನು ನಾರಾಯಣನೇ, ಎಲ್ಲವೂ ನಾರಾಯಣನೇ !

**ವಿಶ್ವಂ ಭೂತಂ ಭುವನಂ ಚಿತ್ರಂ ಬಹುದಾ ಜಾತಂ ।**
**ಜಾಯಮಾನಂ ಚ ಯತ್ ಸರ್ವೋಽಹ್ಯೇಷ ರುದ್ರಃ ॥**

ನಾನಾಚಿತ್ರವಾಗಿ ಹಿಂದೆ ಹುಟ್ಟಿದ ಮುಂದೆ ಹುಟ್ಟುವ ಈ ಪ್ರಪಂಚವೆಲ್ಲವೂ ರುದ್ರನೇ.

**ಆರ್ದ್ರಂ ಜ್ವಲತಿ ಜ್ಯೋತಿ ರಹಮಸ್ಮಿ ಜ್ಯೋತಿರ್ಜ್ವಲತಿ ಬ್ರಹ್ಮಾಹಮಸ್ಮಿ ।**
**ಯೋಽಹಮಸ್ಮಿ ಬ್ರಾಹ್ಮಾ ಮಸ್ಮಿ ಅಹಮೇ ವಾಹಂಮಾಂಜುಹೋಮಿಸ್ವಾಹ ॥**

ಆ ಸಾಕ್ಷಾತ್ಪರಂಜ್ಯೋತಿಯೇ ನಾನಾದೆನೆಂಬುದೇ ಇದರ ತಾತ್ಪರ್ಯ.

**ಅನ್ನಂ ಚ ಬ್ರಹ್ಮ ಅಹಂ ಚ ಬ್ರಹ್ಮ ।**
**ಭೋಕ್ತಾ ಚ ಬ್ರಹ್ಮ ಸರ್ವಂ ಖಲ್ವಿದಂ ಬ್ರಹ್ಮ ॥**

ಅನ್ನವೂ ಬ್ರಹ್ಮವೇ, ನಾನೂ ಬ್ರಹ್ಮವೇ, ಊಟಮಾಡುವವರು ಬ್ರಹ್ಮವೇ, ಎಲ್ಲವೂ ಬ್ರಹ್ಮವೇ ಅಲ್ಲವೆ.

ಭಗವದ್ಗೀತಾ ನವಮಾಧ್ಯಾಯದಲ್ಲಿ—

**ಅಹಂ ಕ್ರತುರಹಂ ಯಜ್ಞಸ್ಸ್ವಧಾಹಮಹಮೌಷಧಂ ।**
**ಮಂತ್ರೋಽಹಮಹಮೇವಾಜ್ಯ ಮಹಮಗ್ನಿರಹಂಹುತಂ ॥**
**ಪಿತಾಹ ಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮ ಯಜುರೇವ ಚ ॥**
**ಗತಿರ್ಭರ್ತಾ ಪ್ರಭುಸ್ಸಾಕ್ಷೀನಿ ವಾಸಶ್ಶರಣಂ ಸುಹೃತ್ ।**
**ಪ್ರಭವಃ ಪ್ರಳಯಸ್ಥಾನಂ ನಿದಾನಂ ಬೀಜಮವ್ಯಯಂ ॥**
**ಅಮೃತಂ ಚೈವಮೃತ್ಯುಶ್ಚ ಸದಸಚ್ಚಾಹಮರ್ಜುನ ॥**

ಯಜ್ಞ, ಕರ್ಮ, ಸ್ವಧಾಕಾರ, ಔಷಧಿ, ಮಂತ್ರ, ಆಜ್ಯ, ಅಗ್ನಿ, ಹುತ ತಂದೆ, ತಾಯಿ, ತಾತ, ತಿಳಿಯಲ್ಪಡತಕ್ಕವನು ಪವಿತ್ರ ಓಂಕಾರ ವೇದಗಳು ಗ ಪ್ರಭು, ಸಾಕ್ಷಿ, ಮನೆ, ರಕ್ಷಕ, ಸ್ನೇಹಿತ, ಪ್ರಭು, ಪ್ರಳಯ, ಕಾರಣ, ಬೀಜ ಅವ್ಯಯ, ಅಮೃತ, ಮೃತ್ಯು, ಸತ್ಪದಾರ್ಥ, ಅಸತ್ಪದಾರ್ಥ ಎಲೈ ಅರ್ಜುನನೆ ಇದೆಲ್ಲವೂ ನಾನೇ.

ಶಿವಗೀತಾ ತ್ರಯೋದಶಾಧ್ಯಾಯದಲ್ಲಿ—

**ಮಯ್ಯೇವ ದೃಶ್ಯತೇ ಸರ್ವಂ ಜಗತ್ ಸ್ಥಾವರ ಜಂಗಮಂ ।**
**ವ್ಯೋಮ್ನಿ ಗಂಧರ್ವನಗರಂ ಯಥಾ ದೃಷ್ಟೇ ನ ದೃಶ್ಯತೇ ॥**
**ಅನಾದ್ಯ ವಿದ್ಯಯಾ ವಿಶ್ವಂ ಸರ್ವಂ ಮಯ್ಯೇವ ಕಲ್ಪ್ಯತೇ ।**
**ನಿವರ್ತತೇತುಮಯ್ಯೇವ ಮಯ್ಯೇ ವೇದಂ ವಿಲೀಯತೇ ॥**
**ಮಮ ಸ್ವರೂಪಜ್ಞಾನೇನ ಯದಾ ವಿದ್ಯಾ ಪ್ರಣಶ್ಯತಿ ।**
**ತದೈಕಏವವರ್ತ್ತೇಹಂ ಮನೋವಾಚಾಮಗೋಚರಃ ॥**
**ನಕಾಲಃ ಪಂಚಭೂತಾನಿ ನದಿಶೋವಿದಿಶಶ್ಚನ ।**
**ಮದನ್ಯಂ ನಾಸ್ತಿಯತ್ಕಿಂಚಿತ್ತದಾವರ್ತೇಹಮೇಕಲಃ ॥**

ಶಿವನು ರಾಮನಂ ಕುರಿತು ಹೇಳುತ್ತಾನೆ. ಎಲೈ ರಾಮನೇ ! ಸ್ಥಾವರ ಜಂಗಮಾತ್ಮಕವಾದ ಈ ಜಗತ್ತೆಲ್ಲಾ ನನ್ನಲ್ಲಿಯೇ ಕಾಣುತ್ತೆ. ಗಗನದಲ್ಲಿ ಗಂಧರ್ವ ನಗರವು ಹೇಗಿಲ್ಲವೊ ಅದರಂತೆ ಅವಿದ್ಯೆಯಿಂದ ನನ್ನಲ್ಲಿ ಕಲ್ಪಿಸಲ್ಪಟ್ಟ ಜಗತ್ತು ವಿದ್ಯೆ ನನ್ನಲ್ಲಿ ನಿವೃತ್ತಿಯು ಲಯವು ಆಗುತ್ತೆ. ನನ್ನ ಸ್ವರೂಪ ಜ್ಞಾನದಿಂದ ಯಾವಾಗ ಅಜ್ಞಾನ ನಾಶವಾಗುವುದೋ ಆಗ ಮನೋವಾಗಗೋಚರನಾದ ನಾನೊಬ್ಬನೇ ಉಳಿಯುತ್ತೇನೆ. ಕಾಲ, ದಿಕ್ಕು, ವಿದಿಕ್ಕು ಇವು ಒಂದೂ ಇಲ್ಲವು. ನನಗಿಂತಲೂ ಅನ್ಯವಾದ ವಸ್ತುವು ಕಿಂಚಿತ್ತಾದರೂ ಇಲ್ಲ ; ನಾನೊಬ್ಬನೇ.

ಅವಧೂತಗೀತೆಯಲ್ಲಿ—

**ಪಂಚಭೂತಾತ್ಮಕಂ ವಿಶ್ವಂ ಮರೀಚಿ ಜಲಸನ್ನಿಭಂ ।**
**ಕಸ್ಯೇಹಾಭೂನ್ನಮಸ್ಕಾರೋಹ್ಯಹಮೇಕೋ ನಿರಂಜನಃ ॥**

ಪಂಚಭೂತಾತ್ಮಕವಾದ ಜಗತ್ತು ಮರುಮರೀಚಿಕಾ ಜಲಸಮಾನವಾಗಿರುವುದು. ಅಂದರೆ ಮರುಮರೀಚಿಕೆಯಲ್ಲಿ ಜಲವು ಹೇಗೆ ಸುಳ್ಳೋ ಭ್ರಾಂತಿಯಿಂದ ಜಲದಂತೆ ಹೇಗೆ ಕಾಣುತ್ತಿರುವುದೋ ಹಾಗೆ ಈ ಜಗತ್ತೆಲ್ಲವೂ ಭ್ರಾಂತಿತೋರ್ಕೆ; ಎಂದಿಗೂ ಜಗತ್ತಿಲ್ಲ ; ಅಜ್ಞಾನದಿಂದ ತೋರುತ್ತಾ ಇದೆ. ಇದರಲ್ಲಿ ಯಾರಿಗೋಸ್ಕರ ನಮಸ್ಕಾರ ? ನಾನೊಬ್ಬನೇ ನಿರಂಜನನಾಗಿದೇನೆ.

ವಿಷ್ಣುಪುರಾಣದಲ್ಲಿ—

**ಯದ್ಯತ್ಪಶ್ಯತಿ ನೇತ್ರಾಭ್ಯಾಂ ತತ್ತದಾತ್ಮೇತಿ ಭಾವಯೇತ್ ।**
**ಯದ್ಯಚ್ಛೃಣೋತಿ ಕರ್ಣಾಭ್ಯಾಂ ತತ್ತದಾತ್ಮೇತಿ ಭಾವಯೇತ್ ॥**

ನೇತ್ರದಿಂದ ಯಾವುದನ್ನು ನೋಡುತ್ತಾನೆಯೋ, ಕಿವಿಯಿಂದ ಏನೇನನ್ನು ಕೇಳುತ್ತಾನೆಯೋ ಅದೆಲ್ಲವು ಆತ್ಮನೆಂದು ತಿಳಿಯಬೇಕು.

ವಿವೇಕಚೂಡಾಮಣಿಯಲ್ಲಿ—

**ಮೃತ್ಕಾರ್ಯಂ ಸಕಲಂ ಘಟಾದಿಸತತಂ ಮೃನ್ಮಾತ್ರಮೇವಾಭವ।**
**ತ್ತದ್ವತ್ಸಂ ಜನಿತಂ ಸದಾತ್ಮಕಮಿದಂ ಸನ್ಮಾತ್ರಮೇವಾಖಿಲಂ ॥**
**ಯಸ್ಮಾನ್ನಾಸ್ತಿತತಃ ಪರಂ ಕಿಮಪಿ ತತ್ಸತ್ಯಂ ಸ ಆತ್ಮಾಸ್ವಯಂ।**
**ತಸ್ಮಾತ್ತತ್ವಮಸಿ ಪ್ರಶಾಂತಮಮಲಂ ಬ್ರಹ್ಮಾದ್ವಯಂ ಯತ್ಪರಂ ॥**

ಮಣ್ಣಿನ ಕಾರ್ಯವಾದ ಘಟ ಮೊದಲಾದುದು ಎತ್ತ ಕಡೆ ನೋಡಿದರೂ ಮಣ್ಣಿಗೆ ಭಿನ್ನಿಸದೆ ಮಣ್ಣೇ ಆಗಿದೆಯೋ ಅದರಂತೆ ಸತ್ತಿನಿಂದ ಹುಟ್ಟಿದ ಜಗತ್ತೆಲ್ಲ ಸದ್ರೂಪವೇ ಆಗಿದೆ. ಯಾವ ಕಾರಣದಿಂದ ಸತ್ತಿಗಿಂತಲೂ ಬೇರೆಯಾದ ಪದಾರ್ಥವೇ ಇಲ್ಲವೋ ಆ ಕಾರಣದಿಂದ ಆ ಸದ್ರೂಪ ಬ್ರಹ್ಮವೇ ನೀನಾಗಿದ್ದೀಯೆ ನಿಶ್ಚಯ.

ಮಹಾವಾಕ್ಯದರ್ಪಣದಲ್ಲಿ—

**ಮರುರೇವಾಂಬು ರೂಪೇಣ ಯಥೈವಾಭಾತ್ಯವಿಕ್ರಯಃ।**
**ರಜ್ಜುರೇವಾಹಿ ರೂಪೇಣ ಯಥಾಭಾತ್ಯ ವಿಕಾರಿಣೇ ॥**
**ತಥೈವ ಜಗದಾಕೃತ್ಯ ಬ್ರಹ್ಮೈವಾ ಭಾತ್ಯವಿಕ್ರಿಯಂ।**
**ಅಪಶ್ಯತಾಮಧಿಷ್ಠಾನಂ ವಿಶ್ವಂಭಾತಿ ಯಥಾರ್ಥವತ್ ॥**
**ಅದೃಷ್ಟ್ವಮರುದೇಶಾನಾಂ ಮರೀಚಿ ಸಲಿಲಂ ಯಥಾ।**
**ಅನ್ಧೈಚ್ಛಧೃಷ್ಟೇಸ್ಸರ್ವತ್ರ ತಮಏವಪ್ರತೀಯತೇ।**
**ಚಕ್ಷುಷ್ಮತಸ್ತೇಜ ಏವ ಯಥಾತದ್ವದಸನ್ಮತೇಃ ॥**

ಮರುಭೂಮಿಯೇ ಜಲಸ್ವರೂಪವಾಗಿ ಹೇಗೆ ಕಾಣುವುದೋ, ಯಾವ ವಿಕಾರವೂ ಇಲ್ಲದ ಹಗ್ಗವೇ ಸರ್ಪದಂತೆ ಹೇಗೆ ಕಾಣುತ್ತದೆಯೋ, ಅಂತೆಯೇ ವಿಕಾರವಿಲ್ಲದ ಬ್ರಹ್ಮವೇ ಜಗದಾಕಾರವಾಗಿ ತೋರುತ್ತಿರುವುದು. ಮರುಭೂಮಿಯನ್ನು ಕಾಣದವರಿಗೆ ಜಲವು ಯಥಾರ್ಥದಂತೆ ಹೇಗೆ ಕಾಣುವುದೋ (ರಜ್ಜುವೊಂದು ತಿಳಿಯದವರಿಗೆ ಸರ್ಪವು ಹೇಗೆ ತೋರುತ್ತಿದೆಯೊ) ಅದರಂತೆ ಅಧಿಷ್ಠಾನವಾದ ಬ್ರಹ್ಮಸ್ವರೂಪವನ್ನು ಕಾಣದವರಿಗೆ ಜಗತ್ತು ಯಥಾರ್ಥವಾಗಿ ತೋರುವುದು. ಹಗಲಿನಲ್ಲಿ ಕುರುಡರಿಗೆ ಎಲ್ಲಿ ನೋಡಿದರೂ ಕತ್ತಲೆಯಾಗಿಯೇ ತೋರುತ್ತದೆ; ಕಣ್ಣುಳ್ಳವರಿಗೆ ತೇಜಸ್ಸು ಕಾಣುತ್ತದೆ; ಇದರಂತೆ ಸ್ವರೂಪ ಜ್ಞಾನಶೂನ್ಯರಿಗೆ ಪ್ರಪಂಚವು ಯಥಾರ್ಥವಾಗಿ ಕಾಣುವುದು; ಜ್ಞಾನಿಗೆ ಮಾತ್ರ ಈ ಪ್ರಪಂಚವು ಸುಳ್ಳಾಗಿರುವುದು.

ಋಭುಗೀತೆಯಲ್ಲಿ—

**ಬ್ರಹ್ಮೈವ ಸರ್ವಂ ನಾನ್ಯೋಽಸ್ತಿ ತದಹಂ ತದಹಂ ತಥಾ ।**
**ತದೇವಾಹಂ ತದೇವಾಹಂ ಬ್ರಹ್ಮೈವಾಹಂ ಸನಾತನಃ ॥**

ಇದೆಲ್ಲಾ ಬ್ರಹ್ಮವೇ. ಬ್ರಹ್ಮಾತಿರಿಕ್ತವಾದುದಾವುದೂ ಇಲ್ಲ. ಆ ಬ್ರಹ್ಮವೇ ನಾನಾಗಿರುವೆನು. ಆತ್ಮಬೋಧೆಯಲ್ಲಿ—

**ತಾವತ್ಸತ್ಯಂ ಜಗದ್ಭಾತಿ ಶುಕ್ತಿಕಾ ರಜತಂ ಯಥಾ ।**
**ಯಾವನ್ನ ಜ್ಞಾಯತೇ ಬ್ರಹ್ಮ ಸರ್ವಾಧಿಷ್ಠಾನಮದ್ವಯಂ ॥**

ಶುಕ್ತಿಜ್ಞಾನವಾಗುವವರೆವಿಗೂ ಬೆಳ್ಳಿಯೆಂಬ ಭ್ರಾಂತಿಯು ಹೇಗಿರುತ್ತದೆಯೋ ಅದರಂತೆ ಬ್ರಹ್ಮಸ್ವರೂಪಜ್ಞಾನವಾಗುವವರೆವಿಗೂ ಜಗತ್ತು ಸತ್ಯದಂತೆ ತೋರುವುದು. ಇದರಂತೆ ಅನೇಕ ಶ್ರುತಿಗಳಲ್ಲೂ, ಪುರಾಣಗಳಲ್ಲೂ, ಯಮಗೀತಾ, ಗಣೇಶಗೀತಾ, ರಾಮಗೀತಾ, ನಾರದಗೀತಾ, ಆತ್ಮಗೀತಾ, ಆತ್ಮಪುರಾಣ, ನೈಷ್ಕರ್ಮ್ಯಸಿದ್ಧಿ, ಸ್ವರಾಜಸಿದ್ಧಿ, ಚಿತ್ಸುಖೀ, ಭೇದಧಿಕ್ಕಾರ, ಆತ್ಮಾನಂದ ಪ್ರಕಾಶಿಕ, ಬ್ರಹ್ಮತತ್ವಸುಬೋಧಿನೀ, ಸೂತಸಂಹಿತಾ, ಜ್ಞಾನವಾಸಿಷ್ಠ, ಅಪರೋಕ್ಷಾನುಭೂತಿ, ದೃಗ್ದೃಶ್ಯವಿವೇಕ, ಅದ್ವೈತಮಕರಂದ, ಜ್ಞಾನದೀಪಿಕಾ ಮುಂತಾದ ಪರಸಹಸ್ರ ಗ್ರಂಥಗಳಲ್ಲಿ ಹೇಳಿದೆಯಾದ್ದರಿಂದ ಪರಮಾತ್ಮನು ಸುಗುಣಧ್ಯಾನಕ್ಕೆ ವಿಷಯವಲ್ಲ. ಸಂಪೂರ್ಣ ಸುಖವನ್ನು ಬಯಸುವವರು ಆತ್ಮನನ್ನು ಪೂರ್ಣನನ್ನಾಗಿ ಭಾವಿಸಬೇಕೆಂದು ಹೇಳಿದ ಗುರುವಚನವನ್ನು ಕೇಳಿ ಶಿಷ್ಯನು ಹೇಳುತ್ತಾನೆ: ಸ್ವಾಮಿ ! ಎಲ್ಲಾ ಬ್ರಹ್ಮಸ್ವರೂಪವಾದ ಪಕ್ಷದಲ್ಲಿ ಜೀವನೂ ಬ್ರಹ್ಮನೇ ಆದನು. ದೇವರು ಸರ್ವಜ್ಞನು ; ಸರ್ವಶಕ್ತಿಯುಳ್ಳವನಾಗಿರುವನು. ಜೀವನು ಕಿಂಚಿತ್‌ಜ್ಞ, ಅಲ್ಪಶಕ್ತಿಯುಳ್ಳವನಾಗಿರಲಿ ; ಈ ಜೀವನು ದೇವರು ಹೇಗಾದಾನೆಂದು ಕೆಲವರು ಆಕ್ಷೇಪಿಸುವರು. ಈ ವಿಷಯವು ಹೇಗೆಂದು ಕೇಳಲಾಗಿ, ಗುರುವು ಶಿಷ್ಯನನ್ನು ಕುರಿತು ನಿನ್ನ ಮನಸ್ಸಿನ ಸಂಶಯವನ್ನು ಕಳೆಯುತ್ತೇನೆ. ಈ ಕೆಳಗೆ ಹೇಳುವ ಸಂಗತಿಗಳನ್ನು ಚನ್ನಾಗಿ ಮನಸ್ಸಿಗೆ ತಂದುಕೋ. ಲೋಕದಲ್ಲಿ ಕೆಲವರು ಹಿತ್ತಾಳೆ, ತಾಮ್ರ, ಮರಗಳಿಂದ ಮಾಡಿದ ಪ್ರತಿಮೆಗಳನ್ನು ದೇವರೆಂದು ಪೂಜಿಸುತ್ತಾರೆ. ಕೆಲವರು ಕಪಿಗಳನ್ನೂ, ಹೆಣವನ್ನೂ ತಿನ್ನುವ ಗರುಡನನ್ನು ದೇವರೆಂದು ಪೂಜಿಸುತ್ತಾರೆ. ಕೆಲವರು (ಬುಡವೇ ಬ್ರಹ್ಮನು, ಮಧ್ಯವೇ ವಿಷ್ಣು, ಕೊನೆಯೇ ಶಿವನೆಂದು) ಅರಳೀಗಿಡವನ್ನು ಪೂಜಿಸುತ್ತಾರೆ. ಕೆಲವರು ಹಾವನ್ನು ಸುಬ್ರಹ್ಮಣ್ಯೇಶ್ವರನೆಂದು ಪೂಜಿಸುತ್ತಾರೆ. ಕೆಲವರು ಕ್ರಿಮಿಗಳಿಂದ ಕೂಡಿದ

ಪಶುವಿನ ಅಮೇಧ್ಯವಾದ ಸಗಣಿಯನ್ನು ಗಣೇಶನೆಂದು ಪೂಜಿಸುತ್ತಾರೆ. ಕೆಲವರು ಅಡಿಕೆಗೋಟು ಮಂತ್ರಾಕ್ಷತೆಗಳನ್ನು ದೇವರೆಂದು ಪೂಜಿಸುತ್ತಾರೆ. ಕೆಲವರು ಹೊಂಗೇಮರ, ಎಕ್ಕದಗಿಡ, ಬಸರೀಮರ ಇತ್ಯಾದಿಗಳನ್ನು ಮದುವೇ ಕಾಲದಲ್ಲಿ ತಮ್ಮ ಕುಲದೇವರೆಂದು ಪೂಜಿಸುತ್ತಾರೆ. ಕೆಲವರು ಹೊಸಲನ್ನೂ, ಕೆಲವರು ನೀರು ತುಂಬಿದ ಗಡಿಗೆಯನ್ನೂ, ಕೆಲವರು ಗುದ್ದಲಿ ಪಿಕಾಶಿಗಳನ್ನೂ, ಇನ್ನೂ ಕೆಲವರು ಇಕ್ಕಳ, ತಂಡಸಾ, ಕತ್ತಿ ಕಠಾರಿಗಳನ್ನು ದೇವರೆಂದು ಪೂಜಿಸುತ್ತಾರೆ. ಕೆಲವರು ಎತ್ತನ್ನೂ, ಕೆಲವರು ಹಸುವನ್ನೂ ದೇವರೆಂದು ಪೂಜಿಸುತ್ತಾರೆ. ಕೆಲವರು ಅರಸಿನದ ಉಂಡೆಯನ್ನೂ, ಮರಳಿನ ಗಂಟನ್ನೂ ದೇವರೆಂದು ಪೂಜಿಸುತ್ತಾರೆ. ಕೆಲವರು ತುಳಸೀಗಿಡ ಬಿಲ್ವಪತ್ರೇಗಿಡ ಇವುಗಳನ್ನು ದೇವರೆಂದು ಪೂಜಿಸುತ್ತಾರೆ. ಎಲೈ ಶಿಷ್ಯನೇ ! ಇವೆಲ್ಲಾ ಹೇಗೆ ದೇವರಾಯಿತು ? ಅರಳೀಮರ ತ್ರಿಮೂರ್ತಿ ಸ್ವರೂಪವಾದಮೇಕೆ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಅದು ಏತಕ್ಕೆ ಮಾಡಲೊಲ್ಲದು. ನಾಗರಹಾವು ಸುಬ್ರಹ್ಮಣ್ಯೇಶ್ವರನಾದಮೇಲೆ ತಾರಕಾಸುರು ಮೊದಲಾದ ರಾಕ್ಷಸ ರನ್ನು ಸಂಹರಿಸುವ ಶಕ್ತಿಯಿರಬೇಕಾಯಿತು. ಸರ್ಪವನ್ನು ಸುಬ್ರಹ್ಮಣ್ಯೇಶ್ವರ ನೆಂದಮೇಲೆ ಸುಬ್ರಹ್ಮಣ್ಯನು ಸಿಕ್ಕಿದವರನ್ನೆಲ್ಲಾ ಕಚ್ಚಿ ಕೊಲ್ಲುತ್ತಿದ್ದನೇ ? ಸುಬ್ರ ಹ್ಮಣ್ಯನು ಮನೆಗೆ ಬಂದರೆ ಆ ಮನೆಯನ್ನು ಬಿಟ್ಟು ಜನಗಳು ಓಡುತ್ತಿದ್ದರೆ ? ಸುಬ್ರಹ್ಮಣ್ಯೇಶ್ವರನು ನರರಿಗೆ ದರ್ಶನ ಕೊಟ್ಟರೆ ಜನಗಳು ಕಂಡು ನಡುಗಿ ಓಡು ತ್ತಿದ್ದರೆ ? ಎತ್ತನ್ನು ನಂದೀಶ್ವರನೆಂದು ಪೂಜಿಸುತ್ತಾರೆ. ನಂದಿಯು ಜನಗಳನ್ನು ಹಾಯುತ್ತಿದ್ದನೇ? ಇವರೆಲ್ಲ ದೇವರು ಹೇಗಾದರು? ಇಂತಹ ತುಚ್ಛವಾದ ತಿರ್ಯಕ್ ಜಂತುಗಳನ್ನು ದೇವರೆನ್ನಬಹುದೆ ? ಈ ಜಡ ಪದಾರ್ಥಗಳೆಲ್ಲವೂ ಮನುಷ್ಯನ ಭಾವನೆಯಿಂದ ದೇವರಾದವು. ಆದರೆ ತನ್ನ ಭಾವನೆಯಿಂದ ಅಚೇತನ ಪದಾ ರ್ಥವೇ ದೇವರಾಗುವಲ್ಲಿ ತನ್ನ ಭಾವನೆಯಿಂದ ಚೇತನಸ್ವರೂಪವಾದ ತಾನು ದೇವರಾಗಲಾರನೇ ?

ಶಿಷ್ಯ—ಸ್ವಾಮಿ ! ದ್ವೈತಭಾವದಿಂದ ಸಗುಣೋಪಾಸನೆಯು ಶ್ರುತ್ಯಾದಿ ಗಳಲ್ಲಿ ಹೇಳಲ್ಪಡುವುದಲ್ಲ ! ಅದಕ್ಕೆ ಗತಿಯೇನು ?

ಗುರು—ಅದು ಅಧಿಕಾರಿಯನ್ನು ಕುರಿತು ಹೇಳುತ್ತದೆ. ಯಾವನು ಅಖಂಡ ತತ್ವವನ್ನು ತಿಳಿಯಲಶಕ್ತನಾಗಿ ಮಹಾ ಸಂಶಯದಿಂದ ಕೂಡಿರುತ್ತಾನೆಯೋ ಅವನಿಗೆ ಪ್ರತಿಮಾದಿ ಸಗುಣೋಪಾಸನೆಯನ್ನು ಹೇಳಿದೆ.

ಶಿಷ್ಯ—ಹಾಗಾದರೆ ಶ್ರುತಿಗಳಲ್ಲಿ ಕರ್ಮಭಾಗ, ಜ್ಞಾನಭಾಗಳೆಂದು ಎರಡಾಯಿತಲ್ಲ?

ಗುರು—ಅಹುದು.

ಶಿಷ್ಯ—ಇವೆರಡರಲ್ಲಿ ಪ್ರಬಲವಾದುದು ದುರ್ಬಲವಾದುದು ಯಾವುದು ?

ಗುರು—ಅದ್ವೈತ ಶ್ರುತಿಯೇ ಪ್ರಬಲವಾದುದು.

ಶಿಷ್ಯ—ದ್ವೈತಶ್ರುತಿಯು ಪ್ರಬಲವಾದದ್ದೆಂದು ಏತಕ್ಕೆ ಹೇಳಕೂಡದು ?

ಗುರು—ಅದ್ವೈತವು ದ್ವೈತಶಾಸ್ತ್ರವನ್ನು ಅದರಲ್ಲಿ ಹೇಳಿರುವ ಕರ್ಮೋಪಾಸನಾದಿಗಳನ್ನೆಲ್ಲ ನಾಯಿಗಿಂತಲೂ ನಿಕೃಷ್ಟವಾಗಿ ನಿಂದಿಸಿ ಖಂಡಿಸುತ್ತದೆ. ಅದ್ವೈತವನ್ನು ನಿಂದಿಸುವುದು ದ್ವೈತಶ್ರುತಿ ; ಕರ್ಮಕಾಂಡ ಪುರಾಣಾದಿಗಳಲ್ಲಿ ಎಲ್ಲಿಯೂ ಇಲ್ಲ. ಅದ್ವೈತವು ಯತಾರ್ಥವಾದ್ದರಿಂದ ಅದಕ್ಕೆ ದ್ವೈತವನ್ನು ಖಂಡಿಸಿ ನಿಂದಿಸುವ ಶಕ್ತಿಯುಂಟಾಯಿತು. ದ್ವೈತವು ಸುಳ್ಳಾದ್ದರಿಂದ ನಿಜವಾದ ಅದ್ವೈತವನ್ನು ಖಂಡಿಸಲಾರದು. ಮತ್ತು ಕರ್ಮಕಾಂಡವಾದ ಯಜುರ್ವೇದ ಸಂಹಿತೆಯ ರುದ್ರವಲ್ಲಿ ಪಶು ಪಕ್ಷಿ ಶ್ವಪಚಾದಿಗಳೆಲ್ಲ ರುದ್ರರೇ ಎಂದು ಅಖಂಡವನ್ನು ಹೇಳುತ್ತಾದ್ದರಿಂದ ಅದ್ವೈತವೇ ಪ್ರಬಲವಾದುದು.

ಶಿಷ್ಯ—ದ್ವೈತವು ಸತ್ಯವಲ್ಲವೆಂದು ಅಪ್ಪಣೆ ಕೊಡಿಸಿದಿರಿ. ಅದು ಹೇಗೆ ?

ಗುರು—ಶಿವಪುರಾಣದಲ್ಲಿ, ವಿಷ್ಣುವು ಶಿವನ ಪಾದಗಳನ್ನು ಪೂಜಿಸಿ ದೊಡ್ಡವನೆನಿಸಿಕೊಂಡನು ಎಂದು ಹೇಳುತ್ತದೆ. ವಿಷ್ಣುಪುರಾಣದಲ್ಲಿ ಶಿವನು ಭಸ್ಮಾಸುರನಿಗೆ ವರವನ್ನು ಕೊಟ್ಟು ಅದನ್ನು ತಪ್ಪಿಸಿಕೊಳ್ಳಲಾರದೆ ವಿಷ್ಣುವನ್ನು ಮರೆಹೊಕ್ಕನೆಂದು ಹೇಳಿದೆ. ಬ್ರಹ್ಮಪುರಾಣದಲ್ಲಿ ಬ್ರಹ್ಮನಿಗಿಂತಲೂ ಅಧಿಕವಾದ ದೈವವೇ ಇಲ್ಲವೆಂದು ಹೇಳುತ್ತೆ. ಗಣೇಶಪುರಾಣದಲ್ಲಿ ತ್ರಿಮೂರ್ತಿಗಳು ಗಣೇಶನ ಆರಾಧನೆಯನ್ನು ಮಾಡಿದರೆಂದು ಹೇಳುತ್ತದೆ. ಸೌರ ಪುರಾಣದಲ್ಲಿ ಸೂರ್ಯನೇ ತ್ರಿಮೂರ್ತಿಸ್ವರೂಪನು ; ಸೂರ್ಯನಿಗಿಂತಲೂ ಅಧಿಕವಾದ ದೇವರೇ ಇಲ್ಲವೆಂದು ಹೇಳುತ್ತದೆ. ದೇವೀಭಾಗವತಾದಿ ಗ್ರಂಥಗಳಲ್ಲಿ ದೇವಿಯು ಬ್ರಹ್ಮ ವಿಷ್ಣು ಶಿವಾದಿಗಳನ್ನು ತನ್ನ ಮಂಚದ ಕಾಲುಗಳನ್ನಾಗಿ ಮಾಡಿಕೊಂಡು ಕೂತುಕೊಂಡಿರುವಳಾದುದರಿಂದ ಶಕ್ತಿಗಿಂತಲೂ ಅಧಿಕ ದೇವರು ಯಾರು ಎಂದು ಹೇಳಿದೆ. ಇದರಂತೆ ಜೈನಶಾಸ್ತ್ರದಲ್ಲಿ ಜಿನ್ನೇದೇವರೇ ದೊಡ್ಡವನೆಂತಲೂ, ಬೌದ್ಧಶಾಸ್ತ್ರದಲ್ಲಿ ಬುದ್ಧನೇ ದೊಡ್ಡವನೆಂತಲೂ, ಮ್ಲೇಚ್ಛಶಾಸ್ತ್ರದಲ್ಲಿ ಮಹಮ್ಮದನೇ ದೊಡ್ಡವನೆಂತಲೂ, ನಾನಾ ಶಾಸ್ತ್ರಗಳಲ್ಲಿ ನಾನಾ ದೇವರುಗಳನ್ನೆಲ್ಲಾ ದೊಡ್ಡವರೆಂದು ಹೇಳುತ್ತದೆ. ಶೈವಸಿದ್ಧಾಂತ ವೈಷ್ಣವಸಿದ್ಧಾಂತಕ್ಕೆ ವಿರೋಧ; ವೈಷ್ಣವಸಿದ್ಧಾಂತ

ಶೈವಸಿದ್ಧಾಂತಕ್ಕೆ ವಿರೋಧ ; ಶೈವಶಾಸ್ತ್ರದಿಂದ ವೈಷ್ಣವಶಾಸ್ತ್ರ ನ್ರಿಕಷ್ಟಮಾಡಲ್ಪಟ್ಟಿದೆ. ವೈಷ್ಣವಶಾಸ್ತ್ರದಿಂದ ಶೈವಶಾಸ್ತ್ರ ನಿಕೃಷ್ಟಮಾಡಲ್ಪಟ್ಟಿದೆ. ಈ ರೀತಿ ಪರಸ್ಪರವಾಗಿ ಒಂದು ಶಾಸ್ತ್ರಕ್ಕೆ ಒಂದು ಶಾಸ್ತ್ರ ವಿರುದ್ಧವಾಗಿ ಒಂದು ಶಾಸ್ತ್ರ ದಿಂದ ಒಂದು ಶಾಸ್ತ್ರ ಬಾಧಿಸಲ್ಪಡುತ್ತದೆ. ಇಂತಹುದರಲ್ಲಿ ದ್ವೈತಶಾಸ್ತ್ರವೆಂದು ನಿಶ್ಚಯಿಸುವ ವಿಷಯದಲ್ಲಿ ಸಂಶಯವೇ ಇಲ್ಲ. ಈ ರೀತಿಯಾಗಿ ಪುರಾಣಾದಿಗ ಳಲ್ಲಿ ಒಂದು ವಿಧವಿಲ್ಲದಿರೋಣದರಿಂದ ಯಾವ ದೇವರನ್ನು ಉತ್ಕೃಷ್ಟವಾಗಿ ಹಿಡಿಯಬೇಕೋ ಅದನ್ನು ಹೇಳು.

ಶಿಷ್ಯ—ಯಾರ್ಯಾರು ಯಾವಯಾವ ದೇವರನ್ನು ನಂಬಿಕೊಂಡಿರುತ್ತಾರೋ ಅವರವರಿಗೆ ಆಯಾಯ ದೇವರೇ ಉತ್ಕೃಷ್ಟವಾದುದು. ಆದ್ದರಿಂದ ಎಲ್ಲವೂ ಉತ್ಕೃಷ್ಟವೆಂದೇ ಹೇಳಬೇಕು.

ಗುರು—ಹಾಗಾದರೆ ಎಲ್ಲವೂ ಬ್ರಹ್ಮಸ್ವರೂಪವೇ ಎಂದು ಹೇಳುವ ನಮ್ಮ ಅದ್ವೈತಕ್ಕೆ ಬಂದಿತು.

ಶಿಷ್ಯ—ಆದರೆ ಕರ್ಮೋಪಾಸನಾದಿಗಳನ್ನೆಲ್ಲಾ ನೀವು ನಿಕೃಷ್ಟಮಾಡಿದಿರಿ. ಈಗ ನಿಮ್ಮ ಮುಖ್ಯಾಭಿಪ್ರಾಯವೇನು ?

ಗುರು—ನೀನು ನಮ್ಮ ಮಾತುಗಳನ್ನೆಲ್ಲಾ ವಿಪರೀತವಾಗಿ ತಿಳಿದುಕೊಂಡಿ ರುವೆ. ನಾವು ಕರ್ಮಿಗಳನ್ನು ಮತ್ತು ಉಪಾಸಕರನ್ನು ನಿಂದಿಸಲಿಲ್ಲ. ಆದರೆ ನಮ್ಮ ಅಭಿಪ್ರಾಯವೇನೆಂಬೆಯೋ ! ಹೇಳುತ್ತೇವೆ ಕೇಳು. ಕರ್ಮವೇ ದೊಡ್ಡ ದೆಂದು ಹೇಳುವ ಕರ್ಮಠನು ಕರ್ಮಶಾಸ್ತ್ರೋಕ್ತಪ್ರಕಾರ ಅರುಣೋದಯಾತ್ಪೂರ್ವ ದಲ್ಲಿಯೆ ಸ್ನಾನ ಸಂಧ್ಯಾದಿ ನಿತ್ಯಕರ್ಮಗಳನ್ನು ತಿರಿಸಿಕೊಂಡು ದೇವತಾಪೂಜೋ ಪಾಸನ ವೈಶ್ವದೇವ ಬ್ರಹ್ಮಯಜ್ಞ ದೇವರ್ಷಿ ಪಿತೃತರ್ಪಣಾದಿ ಕರ್ಮಗಳನ್ನು ಒಂದು ದಿನವಾದರೂ ಬಿಡದೆ ಮಾಡುತ್ತಾ (ಹತ್ತಿ, ಉಪ್ಪು, ಎಣ್ಣೆ, ಆಡು, ಕುರಿ, ಕೋಣ, ಎಮ್ಮೆ, ಕಂಬಳಿ ಎಳ್ಳು) ಮೊದಲಾದ ದುರ್ದಾನಗಳನ್ನು ಎಂತಹ ದಾರಿದ್ರ್ಯ ಬಂದಾಗ್ಯೂ ಹಿಡಿಯದೆ ಶೂದ್ರಸಂಬಂಧವಾದ ದಾನ ಅನ್ನಗಳನ್ನು ಪ್ರತಿಗ್ರಹಿಸದೆ ದ್ರವ್ಯವನ್ನು ಸಂಪಾದಿಸುವುದಕ್ಕಾಗಿ ಯಜ್ಞಪ್ರದತ್ರವಿಡದೆ ತನ್ನ ಸ್ವಯಾರ್ಜಿತವಾದ ವಿತ್ತದಿಂದ ಈಶ್ವರಾರ್ಪಿತವಾಗಿ ಯಜ್ಞವನ್ನು ಮಾಡುತ್ತಾ ಶೂದ್ರಸ್ಪರ್ಶಮಾಡದೆ ಮನೆಗೆ ಬಂದ ಅಭ್ಯಾಗತರನ್ನು ಸತ್ಕರಿಸುತ್ತಾ ವೇದಾಧ್ಯ ಯನರಂಪನ್ನನಾಗಿ ಇರಬೇಕು. ಈರೀತಿ ಇರೋಣದರಿಂದ ಕರ್ಮಿಗೆ ಉಂಟಾಗುವ ಫಲವೇನೆಂದರೆ—(ಸ್ನಾನ ಸಂಧ್ಯಾ ವೈಶ್ವದೇವ ಬ್ರಹ್ಮಯಜ್ಞ ದೇವರ್ಷಿ ಪಿತೃ

ತರ್ಪಣೌಪಾಸನಾದಿಗಳು) ನಿತ್ಯಕರ್ಮಗಳು. (ಗ್ರಹಣ ಸಂಕ್ರಾಂತಿ ಮಹಾಲಯಾದಿಗಳಲ್ಲಿ ಮಾಡುವ ಕರ್ಮಗಳು.) ಶ್ರಾದ್ಧಾದಿಗಳು ನೈಮಿತ್ತಿಕ ಕರ್ಮಗಳು. ಇವುಗಳನ್ನು ಮಾಡುವುದರಿಂದ, ಲೇಶಮಾತ್ರ ಯಾವ ಫಲವೂ ಇಲ್ಲ. ಇವುಗಳಲ್ಲಿ ಯಾವುದನ್ನಾದರೂ ಮಾಡದೇಬಿಟ್ಟಲ್ಲಿ ಮಹಾಪಾಪ ಬರುತ್ತೆ. ಈ ಕರ್ಮಗಳಿಂದ ಇದೇ ಫಲವು. (ನಿತ್ಯನೈಮಿತ್ತಿಕ ಕರ್ಮಾಚರಣೇ ಫಲಂ ನಾಸ್ತಿ ; ಅಕರಣೇ ಪ್ರತ್ಯವಾಯಃ) ಎಂದು ಕರ್ಮಮೀಮಾಂಸಶಾಸ್ತ್ರದಲ್ಲಿ ಹೇಳುತ್ತದೆ. ಆದ್ದರಿಂದ ಕರ್ಮಿಯು ಈ ನಿತ್ಯನೈಮಿತ್ತಿಕ ಕರ್ಮಗಳನ್ನು ಬಿಡದೆ ಮಾಡಿಕೊಂಡು ಇದರಮೇಲೆ ಪ್ರಾಯಶ್ಚಿತ್ತ, ಜಪ, ತಪಸ್ಸುಗಳನ್ನು ಮಾಡಿಕೊಂಡರೆ ಅದರಿಂದ ಸ್ವರ್ಗದಲ್ಲಿ ಸುಖಪಟ್ಟು ಆ ಫಲ ತೀರಲು ಕೆಳಕ್ಕೆ ಉರುಳುತ್ತಾನೆ. ಇಂಥಾ ಕರ್ಮಠನು ಲೋಕಪೂಜ್ಯನು. ಇವನಿಗೆ ಕೊಟ್ಟ ದಾನವು ಸಾರ್ಥಕವಾಗುವುದು. ಈ ಪೂರ್ವೋಕ್ತ ರೀತ್ಯಾ ಕರ್ಮವನ್ನು ಆಚರಿಸುವುದನ್ನು ಬಿಟ್ಟು ಇವನಿಗೆ ದಾನವನ್ನು ಕೊಟ್ಟರೂ ಇವನನ್ನು ನಿಮಂತ್ರಣಕ್ಕೆ ಹೇಳಿದರೂ ನಮ್ಮ ಪಿತೃಗಳು ಸ್ವರ್ಗವನ್ನೇರಿಯಾರೆಂಬ ನಂಬಿಕೆ ಪರರಿಗೆ ಚನ್ನಾಗಿ ಉಂಟಾಗುವುದಕ್ಕೆ ತಕ್ಕ ಭಸ್ಮ, ರುದ್ರಾಕ್ಷ, ಶುಭ್ರವಸ್ತ್ರ ತರ್ಜನೀ, ಪವಿತ್ರ ಉಂಗುರಾದಿಗಳನ್ನು ಧರಿಸಿಕೊಂಡು ಪೂರ್ವೋಕ್ತ ನಂಬಿಕೆ ಉಂಟಾಗತಕ್ಕುದಕ್ಕೆ ಸಾಧನವಾದ ಕರ್ಮ ಶ್ರೇಷ್ಠತ್ವವನ್ನು ಬೋಧಿಸುತ್ತಾ ದುರ್ದಾನ ಪ್ರತಿಗ್ರಹತತ್ಪರನಾಗಿ ಮಹಾಶಿವರಾತ್ರಿ, ಕಾರ್ತೀಕ ಸೋಮವಾರ ಮೊದಲಾದ ಮಹಾದಿವಸಗಳಲ್ಲಿ ಪಾತ್ರಾಪಾತ್ರ ವಿಚಾರಶೂನ್ಯನಾಗಿ ಪರಗೃಹದಲ್ಲಿ ರುದ್ರಾಭಿಷೇಕಮಾಡಿ ಆ ಫಲವನ್ನು ಅವರು ಕೊಡತಕ್ಕ ಧನಕ್ಕೆ ವಿಕ್ರಯಿಸಿ, ಗ್ರಹಣ, ಮಹಾಲಯ, ಪರಪಕ್ಷ, ಸಂಕಾಂತಿ ಪ್ರಭೃತಿ ಪುಣ್ಯದಿನಗಳಲ್ಲಿ ಉದಯಾದ್ಯಸ್ತಮಯಾವಧಿ ಕೃತಪುರಪರ್ಯಟನ ಲಬ್ಧಾಮಶ್ರಾದ್ಧೀಯ ಶಾಕ ಧಾನ್ಯ ದಕ್ಷಿಣಾದ್ರವ್ಯ ದುರ್ಭರ ಗ್ರಂಥಿಭಾರ ಜನಿತಾಯಾಸಪ್ರಸ್ರವತ್ಸ್ವೇದಜಲಧಾರಾಸಿಕ್ತ ಭಸಿತವೇದಿಕಾಲಂಕೃತ ನಿಟಲತಟನಾಗಿ ಭೋಜನಕಾಲಾಗತಾಭ್ಯಾಗತರಿಗೆ ನೇತ್ರಾಂಗುಳಿ ಸಂಜ್ಞಾಸಂದರ್ಶಿತ ಪುರೋವರ್ತಿಗೃಹದ್ವಾರನಾಗಿ ಪರದಿನಗಂತವ್ಯ ಶ್ರಾದ್ಧಕೃದ್ಗೃಹಸ್ಥ ಚಿತ್ತಾನುಸಾರ ಸಮಯನಿಶ್ಚಯೀಕರಣ ಸಂಸ್ಥಾಪಿತ ಚಿತ್ತಾಪನೀತಯಾಮದ್ವಯಾನಂತರಾರಂಭಿತಾನಲ್ಪ ಕಂದರ್ಪ ಕದನ ಕೋಲಾಹಲ ಶ್ರಮಜನಿತ ನಿದ್ರಾ ವಿಸ್ಮೃತ ಶರೀರದಿಂದ ರಾತ್ರಿಯನ್ನು ಕಳೆಯುವ ಶಿಶ್ನೋದರ ಪರಾಯಣರು ಎಂದಿಗೂ ಕರ್ಮಿಗಳಾಗಲಾರರು. ಮತ್ತು ಕರ್ಮಕಾಂಡರೀತ್ಯಾ ಬೆಳಗೆದ್ದು ಮುಖ ಪ್ರಕ್ಷಾಳನ ಕರ್ಮಗಳನ್ನು ಮಾತ್ರ ಬಿಡದೆ ಸಾಧಿಸುವನು ಯಾರು? ಮ್ಲೇಚ್ಛಸ್ಪರ್ಶ

ಬ್ರಾಹ್ಮಣನಿಗಾದರೆ ಸ್ಪರ್ಶವಾದ ಪ್ರದೇಶದಲ್ಲಿನ ಚರ್ಮವನ್ನು ಕಿತ್ತು ಬಿಡಬೇಕೆಂದು ಹೇಳಿದೆ. ಸಂಘಾನ್ನತಿಂದರೆ ಪ್ರಾಯಶ್ಚಿತ್ತವನ್ನು ಇಟ್ಟುಕೊಳ್ಳಬೇಕೆಂದು ಹೇಳಿದೆ. ಹದಿನೈದು ದಿನಗಳು ಕಾಲಾತಿಕ್ರಮವಾಗಿ ಸಂಧ್ಯಾವಂದನೆಯನ್ನು ಮಾಡಿದರೆ ಅವನಿಗೆ ಬ್ರಾಹ್ಮಣ್ಯವೇ ಇಲ್ಲವೆಂದು ಹೇಳಿರುತ್ತದೆ. ಮತ್ತು (ಅತಿಥೌ ತಿಷ್ಠತಿ ದ್ವಾರೇಹ್ಯಪೋಗೃಹ್ಣಾತಿಯೋ ನರಃ । ಆಪೋಶನಂ ಸುರಾಪಾನ ಮನ್ನಂ ಗೋಮಾಂಸ ಸನ್ನಿಭಂ ||) ಕ್ಷುತ್ತಿನಿಂದ ಕೂಡಿದವನು ಬಾಗಿಲಲ್ಲಿ ಕುಳಿತಿರಲು ಅವನನ್ನು ಬಿಟ್ಟು ಊಟಮಾಡಿದರೆ ಅವನು ತೆಗೆದುಕೊಂಡ ಆಪೋಶನವು ಸುರಾಪಾನಕ್ಕೆ ಸಮಾನವು. ಉಂಡ ಅನ್ನವು ಗೋಮಾಂಸ ಸದೃಶವೆಂದು ಹೇಳಿದೆ. ಇದಲ್ಲದೆ ತನ್ನ ಸ್ವಂತ ದ್ರವ್ಯವನ್ನು ಸ್ವಲ್ಪವಾದರೂ ಸೇರಿಸದೇಲು ಯಾಚನೆ ಮಾಡಿದ ದ್ರವ್ಯದಲ್ಲಿ ಎಲ್ಲವನ್ನೂ ಖರ್ಚುಮಾಡದೆ ಲೇಶಾಂಶ ತನ್ನ ಸ್ವಂತಕ್ಕೆ ಇಟ್ಟುಕೊಂಡು ಯಾವನು ಯಜ್ಞಮಾಡುತ್ತಾನೋ ಅಂತಹ ಮನುಷ್ಯನು ಯಜ್ಞದಲ್ಲಿ ಸಂಹರಿಸಿದ ಪಶುವಿನ ಮೈಯೊಳಗೆ ಎಷ್ಟು ರೋಮಗಳಿವೆಯೋ ಅಷ್ಟು ಜನ್ಮಗಳು ಕುರಿಯಾಗಿ ಹುಟ್ಟಿ ನರಳುತ್ತಾನೆಂದು ಹೇಳಿರಲು, ಕರ್ಮವನ್ನು ಸಾಧಿಸುವವನು ಯಾರು ? ಆದ್ದರಿಂದ ಅಲ್ಪವಾದ ಫಲದಿಂದಲೂ ಮಹಾ ಶ್ರಮದಿಂದಲೂ ಕೂಡಿರುವ ಕರ್ಮದಿಂದ ಜನ್ಮ ನಾಶವಾಗಲಾರದು. ಇನ್ನು ಭಕ್ತಿವಿಷಯವನ್ನು ಹೇಳುತ್ತೇನೆ.

ಮಯೂರಧ್ವಜನು ತನ್ನ ಅರ್ಧ ಶರೀರವನ್ನು ಕೊಯ್ದು ಸ್ವಾಮಿಗೆ ಕೊಟ್ಟನು. ಕನ್ನಪ್ಪನು ತನ್ನ ಎರಡು ಕಣ್ಣುಗಳನ್ನು ಕಿತ್ತು ಶಿವನಿಗರ್ಪಿಸಿದನು. ಬಲಿಯು ಮೂರುಲೋಕವನ್ನೆಲ್ಲಾ ಹರಿಗೆ ಸಮರ್ಪಿಸಿದನು. ಪಗೆಯಾಂಡನೆಂಬ ಶಿವಭಕ್ತನು ಶಿವನು ಜಂಗಮ ವೇಷಧಾರಿಯಾಗಿ ಬಂದು ತನ್ನ ಪತ್ನಿಯನ್ನು ಕೊಡು ಎಂದು ಕೇಳಲು ಶಿವಭಕ್ತನು ಕೇಳಿದ ಪದಾರ್ಥವನ್ನು ಕೊಡದ ಜನ್ಮವು ಯಾತಕ್ಕೆಂದು ಪತ್ನಿಯನ್ನು ಕೊಟ್ಟನು. ಶಿವನು ಜಂಗಮ ವೇಷಧಾರಿಯಾಗಿ ಚಿರುತೊಂಡನೆಂಬ ಶಿವಭಕ್ತನ ಮನೆಗೆ ಬಂದು ಮನುಷ್ಯ ಮಾಂಸವನ್ನು ಉಣಲಿಕ್ಕೆಂದು ಕೇಳಲು ಶಿವಭಕ್ತನಿಗೆ ಉಪಯೋಗಿಸದ ಜನ್ಮವು ಯಾತಕ್ಕೆಂದು ತನ್ನ ಮಗನನ್ನು ಸಂಹರಿಸಿ ಪಚನೆಮಾಡಿ ಊಟಕ್ಕೆ ಇಟ್ಟನು. ಎಲೈ ಶಿಷ್ಯನೇ, ಇದು ಶ್ರೇಷ್ಠವಾದ ಭಕ್ತಿ ; ಈ ಭಕ್ತಿಯು ನರನಿಗುಂಟಾದರೆ ದೇವರು ತಕ್ಷಣವೇ ಪ್ರಸನ್ನನಾಗಿ ದಿವ್ಯಜ್ಞಾನವನ್ನು ಪಾಲಿಸಿ ಮುಕ್ತಿಯನ್ನು ಹೊಂದಿಸುವನು. ಈ ರೀತಿಯಾದ ಭಕ್ತಿಯು ಕಲಿಯುಗದಲ್ಲಿ ಸಾಧ್ಯವಾಗಲಾರದು. ಅದರಿಂದ ಕನಿಷ್ಠಭಕ್ತಿಯನ್ನಾದರೂ ಸಾಧಿಸಬೇಕು. ಅದು ಹೇಗೆಂದರೆ—ಸರ್ವಾಶ್ರಯವನ್ನು ಬಿಟ್ಟು

ಭಗವಧ್ಯಾನ, ಭಗವತ್ಪೂಜಾ, ಭಗವನ್ನಾಮಸ್ಮರಣ ನಿರತನಾಗಿ ನಡಿಯುವ, ಮಲಗುವ, ಕುಳಿತಿರುವ ಕಾಲದಲ್ಲೆಲ್ಲಾ ಭಗವತ್ಸ್ಮರಣೆಯನ್ನು ಎಡೆಬಿಡದೆ ಭಗವದ್ಭಕ್ತರು ಮನೆಗೆ ಬಂದರೆ ಅವರ ಚರಣಗಳನ್ನು ತೊಳೆದು ತನ್ನ ಶಕ್ತಿಮಿಾರಿ ಅವರನ್ನು ಪೂಜಿಸುತ್ತ ಯಾವ ಸ್ಥಳದಲ್ಲಿ ಭಗವದುತ್ಸವ ನಡಿಯುತ್ತೋ ಆ ಸ್ಥಳದಲ್ಲಿ ಹೋಗಿ ಧನಿಕರಾದರೆ ದ್ರವ್ಯದಿಂದಲೂ, ದರಿದ್ರನಾದರೆ ದೇಹದಂಚನೆಯಿಂದಲೂ ಸೇವೆಮಾಡಿ ಇತರ ದೇವತೆಗಳನ್ನೂ ತದ್ಭಕ್ತರನ್ನೂ ದೂಷಿಸದೆ ಅಂತಹ ದೂಷಣೆಯ ಮಾತುಗಳನ್ನು ಕೇಳಿದರೆ ಕಿವಿಗಳನ್ನು ಮುಚ್ಚಿಕೊಂಡು ಅಲ್ಲಿ ನಿಲ್ಲದೆ ತನ್ನ ಪುತ್ರಾದಿಗಳಲ್ಲೂ ಧನಾರ್ಜನೆಯಲ್ಲೂ ಎಷ್ಟು ಪ್ರೀತಿಯಿರುವುದೋ ಅಷ್ಟು ಪ್ರೀತಿಯನ್ನು ದೇವತಾಸೇವೆಯಲ್ಲಿಟ್ಟಿದ್ದರೆ ಇದು ಕನಿಷ್ಠಭಕ್ತಿ ಎನಿಸುವುದು. ಇದರಿಂದ ಆಯಾಯ ದೇವತಾಲೋಕಪ್ರಾಪ್ತಿಯಾಗಿ ಕಲ್ಪಾನಂತರ ಆ ದೇವರಿಂದ ತತ್ವೋಪದೇಶವನ್ನು ಪಡೆದು ಅದರಿಂದ ಜ್ಞಾನವುಂಟಾಗಿ ಮುಕ್ತನಾಗುತ್ತಾನೆ. ಇದನ್ನು ಬಿಟ್ಟು (ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ) ಅಂದರೆ ಇತರರು ಯಾರೂ ನನಗೆ ರಕ್ಷಕರಿಲ್ಲ ; ನೀನೇ ರಕ್ಷಕನೆಂಬುದಾಗಿ ಬಾಯಲ್ಲಿ ದೇವರಮುಂದೆ ಹೇಳುತ್ತಾ ಅಡ್ಡಬಿದ್ದು ಉದರ ಪೋಷಣಾರ್ಥವಾಗಿ ನೀಚರನ್ನು ಆಶ್ರಯಿಸುತ್ತಾರೆ. ಮತ್ತು ಈಗಿನ ಭಕ್ತರು ಒಳ್ಳೆಯ ಪುಷ್ಪಾದಿಗಳನ್ನು ಪತ್ನಿಗೆ ಉಪಯೋಗಿಸಿ, ಪತ್ರೆ ಅಕ್ಕಿಯ ಕಾಳನ್ನು ದೇವರಮೇಲೆ ಹಾಕುತ್ತಾರೆ. ಹಣ್ಣಾಗಿರುವ ತೆಂಗಿನಕಾಯಿಗಳು ಮನೆಯೊಳಗಿದ್ದರೂ ಅಂಗಡಿಯಲ್ಲಿ ಎಳೇಕಾಯಿಯನ್ನು ಹುಡುಕಿಕೊಂಡು ದೇವಾಲಯಕ್ಕೆ ಹೋಗುತ್ತಾರೆ. ಎಣ್ಣೆಯು ದುರ್ಗಂಧದಿಂದ ಕೂಡಿದ್ದರೆ ಅಡಿಗೆಗೆ ಉಪಯೋಗಿಸದೆ ದೇವರ ದೀಪಕ್ಕೆ ಉಪಯೋಗಿಸಿ ಎಂದು ಹೇಳುತ್ತಾರೆ. ಮಗನಿಗೆ ಹುಟ್ಟಿದ ದಿನ ಬಂದರೆ ಮಂಗಳವಾದ್ಯಗಳೊಡನೆ ಮಹದುತ್ಸವದಿಂದ ನಡೆಸುತ್ತಾರೆ. ಗುರುದೇವತಾರಾಧನೆಗಳು ಬಂದರೆ ಈ ಸಲ ಅನುಕೂಲ ಕಡಿಮೆ ; ಮುಂದಕ್ಕೆ ಬದುಕಿದ್ದರೆ ನೋಡಿಕೊಂಬೋಣವೆಂದು ಹೇಳುತ್ತಾರೆ. ಮನೆಗೆ ಬಂದ ನೆಂಟರು ಊಟಕ್ಕೆ ಬರತಕ್ಕದ್ದು ಸಾವಕಾಶವಾದರೆ ಕಾದುಕೊಂಡಿದ್ದು ಅವರು ಬಂದನಂತರ ಭುಂಜಿಸುತ್ತಾರೆ. ದೇವರಪೂಜೆ ಸಾವಕಾಶವಾದಲ್ಲಿ ತನಗೆ ಕ್ಷುತ್ತಾದರೆ ತಾನು ಊಟಮಾಡಿ ಅನಂತರ ದೇವರಿಗೆ ಬೆಲ್ಲದ ಮುರುಕೋ ಅಥವಾ ತುಪ್ಪದ ಮಿಳ್ಳೆಯೊ ತೋರಿಸುತ್ತಾರೆ. ತನಗೆ ಇಷ್ಟರು ಊರಿಗೆ ಬರುವ ವರ್ತಮಾನವಿದ್ದರೆ ಬಹುದೂರ ಎದುರುಗೊಳ್ಳುವುದಕ್ಕೆ ಹೋಗುತ್ತಾರೆ. ದೇವತಾ ಉತ್ಸವವು ಬೀದಿಯಲ್ಲಿ ಬಂದರೆ ಮುಚ್ಚಿರುವ ಬಾಗಿಲನ್ನು

ತೆರೆಯುವುದಿಲ್ಲ. ಈ ರೀತಿ ಭಕ್ತಿಯನ್ನು ಮಾಡಿದರೆ ಪಾಪಕ್ಷಯ ಹೇಗಾಗು ವುದೋ? ಯಮದರ್ಶನ ಹೇಗಾಗದೇ ಹೋಗುತ್ತೋ ದೇವರೇ ಬಲ್ಲ. ಈ ಠಕ್ಕು ಭಕ್ತಿಯಿಂದ ಪ್ರಯೋಜನವಿಲ್ಲ. (ದೂಷಣಾನ್ನರಂಯಾಂತಿ ಕಲೌ ಭಾಗವತಾ ಅಪಿ) ಅಂದರೆ ಕಲಿಯುಗದಲ್ಲಿ ಭಗವದ್ಭಕ್ತರಾದಾಗ್ಯೂ ಇತರ ದೇವತಾದೂಷಣೆಯಿಂದ ನರಕವನ್ನೇ ಸೇರುತ್ತಾರೆಂದು ಭವಿಷ್ಯೋತರಪುರಾಣದಲ್ಲಿ ಹೇಳಿರುತ್ತೆ. ಈಗಿನ ಕಾಲದಲ್ಲಿ ಚನ್ನಾಗಿ ಶಿವದೂಷಣೆ ಮಾಡತಕ್ಕ ವಿಷಯದಲ್ಲಿ ಯಾವನು ಶಕ್ತನೋ ಅವನೇ ವಿಷ್ಣುಭಕ್ತನು. ವಿಷ್ಣು ದೂಷಣೆಯಲ್ಲಿ ಯಾವನು ಶಕ್ತನೋ ಅವನೇ ಶಿವಭಕ್ತನೆಂತಲೂ ನಿಶ್ಚೈಸಿದಾರೆ. ಹಿರಣ್ಯಾಕ್ಷ ರಾವಣಾದಿಗಳು ಪರಮ ಶಿವಭಕ್ತ ರಾದಾಗ್ಯೂ ವಿಷ್ಣುದೂಷಕರಾದ್ದರಿಂದ ನಾಶವಾದರು. ಪ್ರಹ್ಲಾದ ವಿಭೀಷಣಾ ದಿಗಳು ವಿಷ್ಣುಭಕ್ತರಾಗಿ ಶಿವದೂಷಣೆಯಿಲ್ಲದ್ದರಿಂದ ಕೃತಾರ್ಥರಾದರು. ವಿಷ್ಣು ದೂಷಕನಾದ ಶಿವಭಕ್ತನಿಗೆ ಶಿವನೂ, ಶಿವದೂಷಕನಾದ ವಿಷ್ಣುಭಕ್ತನಿಗೆ ವಿಷ್ಣುವೂ ಎಂದಿಗೂ ಪ್ರಸನ್ನನಾಗಲಾರನು. ಆಕಳ ಕೆಚ್ಚಲಿನಲ್ಲಿದ್ದಾಗ್ಯೂ ಅದರಲ್ಲಿನ ಹಾಲನ್ನು ಗ್ರಹಿಸದೇ ರಕ್ತವನ್ನು ಹೀರುವ ಉಣ್ಣೆಯಂತೆಯೂ,ಕಮಲದ ಬುಡದಲ್ಲಿದ್ದಾಗ್ಯೂ ಅದರೊಳಗಿರುವ ಮುತ್ತುಗಳನ್ನು ಹುಡುಕದೆ ಮೀನುಗಳನ್ನು ಹುಡುಕುವ ಕೊಕ್ಕರೆ ಯಂತೆಯೂ, ಪರರ ಸುಗುಣಗಳನ್ನು ಬಿಟ್ಟು ದುರ್ಗುಣಗಳನ್ನೇ ಹುಡುಕುವನಾ ಗಿಯೂ, ಪರದಾರಗಮನ ಪರದ್ರವ್ಯಾಪಹರಣ ಚಿತ್ತೋಪೇತನಾಗಿಯೂ, ಸತತಾವ ಲಂಬಿತ ಗಂಧಮಾಲ್ಯ ವಸ್ತ್ರಾಭರಣಾದ್ಯಲಂಕಾರ ಪರಿಜಿತ ನಟವಿಟಕುಲ ಸಾರ್ವ ಭೌಮನಾಗಿ ಸಕಲ ನಿಗಮಾಗಮ ಸಿದ್ಧಾಂತಿತ ತಾದೃಗೀದೃಕ್ತ್ವಮಹಮಯ ಮಯಮಾದಿ ಭೇದಾಭಾವತಾವಚ್ಛೇದಕತ್ವ ವಿಶಿಷ್ಟಲಕ್ಷಣ ಲಕ್ಷಿತಾಖಂಡೈಕ ವಸ್ತು ಸ್ವರೂಪ ಜ್ಞಾನಶೂನ್ಯನಾಗಿ ಅನಾಘ್ರಾತಾದ್ವೈತ ಭಾಷ್ಯಾದಿಗ್ರಂಥಗಂಧಲವತ್ವ ಜನಿತಾ ಜ್ಞಾನಾಕ್ಷೇಪಿತ ಜ್ಞಾನಪಥನಾಗಿರುವ ಮನುಷ್ಯನು ಯಾವ ದೇವರನ್ನು ಪೂಜಿಸುತ್ತಾನೋ ಅವನ ವಂಶಾಂಕುರ ಮೂಲೋತ್ಪಾಟನ ಮಾಡುತ್ತೆಂಬುದು ಜಗತ್ಪ್ರಸಿದ್ಧವಾಗಿರುತ್ತೆ. ಇತರ ದೇವರನ್ನು ತದ್ಭಕ್ತರನ್ನೂ ದೂಷಿಸುವ ತನ್ನ ಭಕ್ತನಿಗೆ ಒಲಿಯುವ ದೇವರು ಇನ್ನೆಂತಹ ದೇವರೆಂದು ಹೇಳಬಹುದು ? ಆದ್ದ ರಿಂದ ಭಕ್ತಿಯಿಂದ ಮುಕ್ತಿಯನ್ನು ಪಡೆಯುತ್ತೇನೆಂಬುದು ವಂಧ್ಯಾಪುತ್ರನಂತಿ ಹುದು. (ಇನ್ನು ಯೋಗವಿಷಯವನ್ನು ಕೇಳು) ಯೋಗಶಾಸ್ತ್ರವನ್ನು ಬಾಯಲ್ಲಿ ಕಲಿತಿದ್ದರಿಂದ ಪ್ರಯೋಜನವಿಲ್ಲ. ಪಾಕಶಾಸ್ತ್ರವನ್ನು ಕಲಿತಿದ್ದರಿಂದ ಕ್ಷುದ್ಬಾಧೆಯಿಂದಾಗಲಾರದು. ಚಿನ್ನವನ್ನು ಮಾಡುವ ವಾದಶಾಸ್ತ್ರವನ್ನು ಎಲ್ಲರೂ

ಕಲಿತಿದ್ದಾರೆ. ಚಿನ್ನವಾಗಲಿಲ್ಲ ; ದಾರಿದ್ರ್ಯವಿಂಗಲಿಲ್ಲ. ಇದರಂತೆ ರೇಚಕ ಹೀಗೆ, ಪೂರಕಹೀಗೆ ಇದು ಕುಕ್ಕುಟಾಸನ, ಇದು ಮಯೂರಾಸನ ಎಂದು ಶಾಸ್ತ್ರ ಕಲಿತು ಬಾಯೊಳಗೆ ಹೇಳಿದ ಮಾತ್ರದಿಂದ ಯಾವ ಪ್ರಯೋಜನವೂ ಇಲ್ಲ. ತನ್ನಲ್ಲಿ ಸಿದ್ಧಿಗಳು ತೋರಿದರೇಸೇ ಯೋಗವು ಪ್ರಯೋಜನಕ್ಕೆ ಬರತಕ್ಕದ್ದು. ಯೋಗಕ್ಕೆ(ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ) ಎಂದು ಎಂಟಂಗಗಳಿವೆ. ಇವುಗಳಲ್ಲಿ ಪ್ರತಿಯೊಂದು ಅಂಗವನ್ನೂ ಸಾಧಿಸಬೇಕು. ಯಮವೆಂಬ ಅಂಗವನ್ನು ಸಾಧಿಸಬೇಕಾದರೆ ಅದಕ್ಕೆ (ಅಹಿಂಸಾ ಸತ್ಯ ಅಸ್ತೇಯ) ಎಂಬಿವೇ ಮೊದಲಾದ ಹತ್ತು ಅಂಗಗಳುಂಟು. ಇದರಲ್ಲಿ ಅಹಿಂಸಾ ಅಂದರೆ ಇರುವೆ ಮೊದಲು ಯಾವ ಪ್ರಾಣಿಯನ್ನು ಸ್ವಲ್ಪವಾದರೂ ಹಿಂಸಿಸಬಾರದು. ಈ ಅಂಗವನ್ನು ಮೊದಲು ಸಾಧಿಸಬೇಕು. ಇದು ಸಿದ್ಧಿಯಾದ ನಂತರ ಅಸ್ತೇಯವೆಂಬ ಅಂಗವನ್ನು ಸಾಧಿಸಬೇಕು. ಅದರೆ ಮೊದಲನೆಯದು ಸಿದ್ಧಿಯಾಯಿತು ಎಂಬ ವಿಷಯವು ಹೇಗೆ ತಿಳಿಯಬೇಕೆಂದರೆ:—

**(ಯದಾ ಯೋಗಾಂಗ ಸಿದ್ಧಿಸ್ಸ್ಯಾತ್ತದಾಚಿಹ್ನಾನಿ ಬಾಹ್ಯತಃ)**

ಯಾವಾಗ್ಗೆ ಯೋಗಾಂಗಗಳು ಸಿದ್ಧಿಸುವವೋ ಆವಾಗ್ಗೆ ಬಾಹ್ಯದಲ್ಲಿ ಗುರ್ತುಗಳು ತೋರುತ್ತವೆ ಎಂದು ಪ್ರಮಾಣವಿರೋಣದರಿಂದ ಅಹಿಂಸೆ ಎಂಬ ಅಂಗವು ಸಿದ್ಧಿಸಿತೆಂಬ ವಿಷಯಕ್ಕೆ ಗುರ್ತೇನೆಂದರೆ:—ಈ ಅಭ್ಯಾಸಿಯು ಇರುವ ಸಮೀಪದಲ್ಲಿ (ಇಲಿ–ಬೆಕ್ಕು, ಹುಲಿ–ಹಸು) ಇತ್ಯಾದಿ ಪರಸ್ಪರ ದ್ವೇಷವುಳ್ಳ ಜಂತುಗಳು ತಮ್ಮ ತಮ್ಮ ದ್ವೇಷಗಳನ್ನು ಬಿಟ್ಟು ಪರಮ ಸ್ನೇಹದಿಂದ ಸಂಚರಿಸುತ್ತವೆ. ಈ ಪ್ರಕಾರ ಸಿದ್ಧಿ ತೋರಿದರೆ (ಅಹಿಂಸಾ) ಎಂಬ ಅಂಗವು ಸಿದ್ಧಿಸಿತು. ಅನಂತರ (ಸತ್ಯಂ) ಎಂಬ ಅಂಗವನ್ನು ಸಾಧಿಸಬೇಕು. ಈ ರೀತಿ ಯಮದ ಹತ್ತಂಗಗಳನ್ನೂ, ನಿಯಮದ ಹತ್ತಂಗಗಳನ್ನೂ ಸಿದ್ಧಿಯುಂಟಾಗುವ ರೀತಿ ಸಾಧಿಸಿ ಅನಂತರ ಆಸನಗಳನ್ನು ಸಾಧಿಸಬೇಕು. ಆಸನ ಸಿದ್ಧಿಯಾದವನಿಗೆ ಒಂದು ದಿನವೆಲ್ಲಾ ಸ್ತ್ರೀಸಂಗಮಾಡಿದರೂ ವೀರ್ಯಪತನವಾಗುವುದಿಲ್ಲ. ಆಸನ ಸಿದ್ಧಿಸಿದ ನಂತರ ಪ್ರಾಣಾಯಾಮಾರಂಭ ಮಾಡಬೇಕು. ಪ್ರಾಣಾಯಾಮಾಭ್ಯಾಸ ಕಾಲದಲ್ಲಿ ಮೊದಲು ದೇಹ ನಡಗುತ್ತೆ. ಅನಂತರ ಬೆವರು ಉಂಟಾಗುತ್ತೆ. ಅನಂತರ ಭೂಮಿಯನ್ನು ಬಿಟ್ಟು ಮೇಲಕ್ಕೆ ಏಳುತ್ತಾನೆ. ಇಲ್ಲಿಗೆ ಪ್ರಾಣಾಯಾಮ ಸ್ವಾಧೀನಕ್ಕೆ ಬಂತು. (ಮಲಮೂತ್ರವಿಲೇಪೇನ ಲೋಹೋ ಭವತಿ ಕಾಂಚನಂ) ಪ್ರಾಣಾಯಾಮ ಸಿದ್ಧಿಯಾಗಿರುವ ಯೋಗಿಯ ಮಲಮೂತ್ರಗಳು ಲೋಹಕ್ಕೆ

ಸೋಕಿದರೆ ಅದು ಚಿನ್ನವಾಗುತ್ತೆಂದು ಉಪನಿಷತ್ತಿನಲ್ಲಿ ಹೇಳಿರುತ್ತಾಗಿ ಈ ರೀತಿ ಪ್ರಾಣಾಯಾಮ ಸಿದ್ಧಿಸಿದ ನಂತರ ಮುಂದಕ್ಕೆ ಸರ್ವವೂ ಸುಲಭವಾಗಿರುತ್ತೆ. ಇನ್ನು ತಾರಕ ವಿಷಯವನ್ನು ಕೇಳು—ಕಣ್ಣುಗಳನ್ನು ಮುಚ್ಚಿಕೊಂಡು ಅಮುಕಿದರೆ ನೇತ್ರದಲ್ಲಿರುವ ತೇಜಸ್ಸೇ ಕೆಂಪಗೆ ಗುಂಡಾಗಿ ಸರ್ವರಿಗೂ ಕಾಣಬರುತ್ತೆ. ಇದನ್ನು ತಿಳಿಯದ ಮೂಢರಿಗೆ, ಉದರ ಪೋಷಕ ಯೋಗಿಗಳು ತಾರಕವನ್ನು ತೋರಿಸುವೆನೆಂದು ಭ್ರಮೆಗೊಳಿಸುತ್ತಾರೆ. ಇದಕ್ಕೂ ಯೋಗಸಿದ್ಧಿಗಳುಂಟು. ತಾರಕವನ್ನು ನೋಡತಕ್ಕವನಿಗೆ ಪ್ರಥಮದಲ್ಲಿ ಬೆಂಕಿಯ ಕಿಡಿಗಳು ಕಾಣಬರುತ್ತೆ. ಅನಂತರ ನಕ್ಷತ್ರಗಳು ಕಾಣಬರುತ್ತೆ. ಅನಂತರ ಪೂರ್ಣ ಚಂದ್ರಮಂಡಲ ಕಾಣುತ್ತೆ. ಅಲ್ಲಿಗೆ ತಾರಕ ಸಿದ್ಧಿಯಾಯಿತು. ಕೆಲವರು ಇವೆಲ್ಲಾ ನಮಗೆ ಕಾಣುತ್ತೆಂದು ಮೋಸಪಡಿಸುತ್ತಾರೆ. ಇವಕ್ಕೆ ಸಿದ್ಧಿಗಳುಂಟು. ಯಾವುವೆಂದರೆ—(ಪಶ್ಯನ್ನಗ್ನಿಕಣಾನ್ಯೋಗೀ ಭವೇದ್ಯೋಜನದೃಷ್ಟಿರ್ಮಾ) ತಾರಕದಲ್ಲಿ ಕಿಡಿಗಳು ಕಾಣುವ ಮಟ್ಟಿಗಾದರೆ ಅವನಿಗೆ ಐದು ಹರಿದಾರಿ ದೂರದಲ್ಲಿರುವ ಸಣ್ಣ ವಸ್ತುಗಳು ಕಣ್ಣಿಗೆ ಕಾಣುತ್ತೆ. (ಯದಾತು ತಾರಕಂ ಪಶ್ಯೇದ್ಧ್ವಾಂತೌ ಪಠತಿ ಪುಸಕಂ) ನಕ್ಷತ್ರಗಳು ಕಾಣುವ ಮಟ್ಟಿಗಾದರೆ ಕತ್ತಲೆಯಲ್ಲಿ ಪುಸ್ತಕವನ್ನು ಓದುವುದು (ಪೂರ್ಣಬಿಂಬಂ ಯದಾಪಶ್ಯೇದ್ಬಾಹ್ಯಾಹಾರೋನರೋಚತೇ) ಪೂರ್ಣಬಿಂಬ ಕಂಡವನಿಗೆ ಸಹಸ್ರಾರದಿಂದ ಸುರಿಯುವ ಅಮೃತವನ್ನು ಪಾನಮಾಡುತ್ತಾನಾಗಿ ಮರಣಾದಿ ಬಾಹ್ಯದ ಅನ್ನಾದ್ಯಾಹಾರವೇ ಇಲ್ಲ. ಈ ರೀತಿ ಸಿದ್ಧಿಗಳು ಕಂಡು ಬಂದರೆ ಅವನನ್ನು ಯೋಗಿಯೆಂದು ಹೇಳಬಹುದು. ಸಿದ್ಧಿ ಪಡೆದ ಯೋಗಿಯಲ್ಲೇ ಯೋಗಾಭ್ಯಾಸ ಮಾಡಬೇಕು. ಸಿದ್ಧಿ ಪಡೆದ ಯೋಗಿಯಲ್ಲಿ ಕಲಿಯದಿದ್ದರೆ ಅಂಗಹೀನವಾಗುತ್ತೆ. ಸಿದ್ಧಿಯುಳ್ಳವನಿಗೆ ಇತರರಿಂದ ಏನೂ ಪ್ರಯೋಜನವಿಲ್ಲದ್ದರಿಂದ ಅವನು ಕಣ್ಣಿಗೆ ಗೋಚರನಾಗುವುದಿಲ್ಲ. ಅಥವಾ ಕಂಡರೂ ನಾನು ಯೋಗಿಯೆಂದು ಹೇಳುವುದಿಲ್ಲ. ಆದಕಾರಣ ಯೋಗದಿಂದ ಮುಕ್ತನಾಗುವುದು ಎಂದಿಗೂ ಇಲ್ಲ. ಇಷ್ಟು ಶ್ರಮಪಟ್ಟಾಗ್ಯೂ ಯೋಗದಿಂದ ಮಹಾ ಸಿದ್ಧಿಗಳನ್ನು ಪಡೆಯಬಹುದೇ ವಿನಹ ಮೋಕ್ಷವುಂಟಾಗಲಾರದು. ಮೋಕ್ಷವುಂಟಾಗಬೇಕಾದರೆ ಮಹಾ ಯೋಗಿಗಾದರೂ ಜೀವಬ್ರಹ್ಮೈಕ್ಯಜ್ಞಾನವೇ ಆಗಬೇಕು. ಯೋಗಾಭ್ಯಾಸಕ್ಕೆ ಮೊದಲು (ದುರಾಹಾರಂಚಾತಿ ನಿದ್ರಾಂ ವಹ್ನಿ ಸ್ತ್ರೀ ಪಥ ಸೇವನಂ॥ ಪ್ರಾತಸ್ನಾನೋಪವಾಸಾದಿ ಕಾಯಕ್ಲೇಶಾಂಶ್ಚ ವರ್ಜಯೇತ್ ॥ ) ದುರಾಹಾರ, ಅತಿ ನಿದ್ರೆ, ಬೆಂಕಿ ಕಾಯುವುದು, ಸ್ತ್ರೀಸಂಗ, ದಾರಿ ನಡೆಯುವುದು, ಪ್ರಾತಸ್ನಾನ, ಉಪ

ವಾಸ ಮೊದಲಾದವುಗಳನ್ನು ಬಿಡಬೇಕೆಂದು ಹೇಳಿದೆ. ಕೆಲವರು ನೀರು ಕುಡಿದು ಗುದದ್ವಾರದಿಂದ ಬಿಡುತ್ತಾರೆ. ಕೆಲವರು ಮೂಗಿನಲ್ಲಿ ದಾರವನ್ನು ತೂರಿಸಿ ಬಾಯೊಳಗೆ ತೆಗೆಯುತ್ತಾರೆ. ಕೆಲವರು ಆಸನಗಳನ್ನೆಲ್ಲಾ ಹಾಕುತ್ತಾರೆ. ಈ ಕೆಲಸ ವನ್ನು ಗಾರುಡಿಗರು ಕೂಡ ಮಾಡುತ್ತಾರೆ. ಇದರಿಂದ ಯಾವ ಪ್ರಯೋಜನವೂ ಇಲ್ಲ. ಆದ್ದರಿಂದ ಸಿದ್ಧಿ ಕಂಡರೇನೇ ಯೋಗವು ಪ್ರಯೋಜನ. ಇಲ್ಲದಿದ್ದರೆ ವ್ಯರ್ಥವೆಂದು ತಿಳಿ.

ಶಿಷ್ಯ—ಸ್ವಾಮಿ! (ಕರ್ಮ, ಭಕ್ತಿ, ಯೋಗ) ಇವುಗಳ ವಿಷಯವಾಗಿ ಶಾಸ್ತ್ರ ಸಮ್ಮತವಾಗಿ ನೀವು ಆಕ್ಷೇಪಿಸಿದಿರಿ. ನಿಮ್ಮ ಜ್ಞಾನವಿಷಯದಲ್ಲಿ ಅನೇಕರು ನಾನಾವಿಧ ಆಕ್ಷೇಪಗಳನ್ನು ಮಾಡುತ್ತಾರೆ. ಆದ್ದರಿಂದ ಅದನ್ನು ಕೇಳಿದರೆ ಜ್ಞಾನಮಾರ್ಗವನ್ನು ಹಿಡಿಯುವುದಕ್ಕೇನೆ ಭೀತಿಯಾಗುವುದು. (ಆ ಆಕ್ಷೇಪಣೆ ಗಳು ಯಾವುವೆಂದರೆ:—ಈಶ್ವರಾರ್ಪಿತವಾಗಿ ಮಾಡಲ್ಪಟ್ಟ ಪುಣ್ಯಕರ್ಮಫಲದಿಂದಲೇ ಜ್ಞಾನ ಉಂಟಾಗತಕ್ಕುದೆಂದು ನೀವೂ ಒಪ್ಪುತ್ತೀರಿ. ಆದರೆ ಜ್ಞಾನಕ್ಕೆ ಕರ್ಮವೇ ಮೂಲವಾಯಿತು. ಆದ್ದರಿಂದ ಜ್ಞಾನಿಯಾದಾಗ್ಯೂ (ಜ್ಞಾನಕ್ಕೆ ಮೂಲವಾದ ಕರ್ಮವನ್ನು ಬಿಡಕೂಡದು.) ಜ್ಞಾನಿಯಾದ ಬ್ರಹ್ಮನು ಬಾಹ್ಯವ್ಯಾಪಾರವಿಲ್ಲದೆ ನಿರ್ವಿಕಲ್ಪಸಮಾಧಿ ನಿಷ್ಠನಾಗಿ ದೇಹಸ್ಮರಣೆಯಿಲ್ಲದೆ ಕಲ್ಲಿನಂತೆ ಇರಬೇಕು. ಜ್ಞಾನಿಯು ಅಜ್ಞನಂತೆ ಬಾಹ್ಯವ್ಯಾಪಾರದಿಂದ ಕೂಡಿ ಸಂಸಾರದಲ್ಲಿರತಕ್ಕುದು ಸರಿಯಲ್ಲ. ಬ್ರಹ್ಮವನ್ನು ತಿಳಿದವನಿಗೆ ಶಾಪಾನುಗ್ರಹ ಸಾಮರ್ಥ್ಯವಿರಬೇಕು. ಈ ನಾಲ್ಕು ವಿಧವಾದ ಆಕ್ಷೇಪಣೆಗಳಿಗೆ ಶಾಸ್ತ್ರಸಮ್ಮತವಾದ ಸಮಾಧಾನವನ್ನು ಹೇಳಬೇಕು.

ಗುರು—ಈ ಆಕ್ಷೇಪಗಳನ್ನು ಶಾಸ್ತ್ರಜ್ಞಾನಶೂನ್ಯನಾದ ಮೂಢನು ಮಾಡ ತಕ್ಕುದು. (ಜ್ಞಾನಕ್ಕೆ ಮೂಲವಾದ ಕರ್ಮವನ್ನು ಬಿಡಕೂಡದೆಂದು ಮಾಡಿದ ಪ್ರಥಮಾಕ್ಷೇಪಕ್ಕೆ ಸಮಾಧಾನ) ಲೋಕದಲ್ಲಿ ವಿದ್ಯವನ್ನು ಕಲಿಯುವುದಕ್ಕೆ ಶ್ರೀ ಓ ನಾಮ ಕಾಗುಣಿತಗಳೇ ಮೂಲ. ಆದರೆ ಸರ್ವದಾ ಶ್ರೀ ಓ ನಾಮಗಳನ್ನೇ ತಿದ್ದುತ್ತಿದ್ದರೆ ಇವನು ಪಂಡಿತನಾಗುವುದು ಯಾವಾಗ್ಯೆ? ಧಾನ್ಯಪ್ರಾಪ್ತಿಗೆ ಭೂಮಿ ಯನ್ನು ಉಳುವುದೇ ಮೂಲ. ಸದಾ ಉಳುವುದರಲ್ಲೇ ಇದ್ದರೆ ಫಲಪ್ರಾಪ್ತಿ ಯಾವಾಗ್ಯೆ? ಪಾಕಕ್ಕೆ ಬೆಂಕಿಯೇ ಮೂಲವೆಂದರಿತು ಅನ್ನಕ್ಕೆ ಎಸರಿಡದೆ ಉರಿ ಯನ್ನೇ ಹಾಕುತ್ತಿದ್ದರೆ ಕ್ಷುದ್ಬಾಧೆ ಇಂಗುವುದು ಯಾವ ಕಾಲಕ್ಕೆ? ಇದರಂತೆ ಜ್ಞಾನಕ್ಕೆ ಕರ್ಮವೇ ಮೂಲವೆಂದರಿತು ಜ್ಞಾನಸಾಧನೆಯನ್ನು ಬಿಟ್ಟು ಸರ್ವದಾ ಕರ್ಮ

ದಲ್ಲೇ ಇದ್ದರೆ ಮುಕ್ತನಾಗುವುದು ಯಾವಾಗ್ಯೆ? ಆದರೆ ಜ್ಞಾನವೂ ಈ ಜನ್ಮದಲ್ಲಿ ಮಾಡಿದ ಕರ್ಮದಿಂದ ಬೇರೆ ಉಂಟಾಗುವುದಿಲ್ಲ. (ತದ್‍ಜ್ಞಾನಂ ಶತಕೋಟಿ ಜನ್ಮ ರಚಿತೈಃ ಪುಣ್ಯೈರ್ವಿನಾ ಲಭ್ಯತೇ) ಅಂದರೆ ಜ್ಞಾನವು ಶತಕೋಟಿಜನ್ಮಗಳಲ್ಲಿ ಮಾಡಿದ ಪುಣ್ಯವಿಲ್ಲದಮೇಲೆ ಉಂಟಾಗಲಾರದು ಎಂದು ಹೇಳಿರುತ್ತಾಗಿ ಈ ಜನ್ಮದ ಕರ್ಮವೇನೂ ಅವಶ್ಯಕವಿಲ್ಲ. ಆದ್ದರಿಂದ ಮನುಷ್ಯನು ಮೊದಲು ಆತ್ಮಾನಾತ್ಮ ವಿಚಾರವನ್ನೇ ಮಾಡಬೇಕು. ಜ್ಞಾನವಿದ್ಯೆಯು ಸತರಾಂ ಮನಸ್ಸಿಗೆ ಹತ್ತದೆ ಇರುವ ಮನುಷ್ಯನು ಜ್ಞಾನಾಭ್ಯಾಸವನ್ನು ಬಿಟ್ಟು ಸತ್ಕರ್ಮವನ್ನು ಮಾಡಬೇಕು. ಆತ್ಮವಿಚಾರ ಮಾಡುತ್ತ ಇದ್ದು ಇನ್ನೂ ಸಂಶಯ ತೋರುತ್ತಿದ್ದರೆ ಅಂಥಾ ಮನುಷ್ಯನು ಸತ್ಕರ್ಮ, ಬ್ರಹ್ಮವಿಚಾರ ಇವೆರಡನ್ನೂ ಮಾಡಬೇಕು. ಯಾವನಿಗೆ ದೇಹಕ್ಕೆ ಹೇಳಿದ ಕರ್ಮಗಳು ತನ್ನಲ್ಲಿ ತೋರುತ್ತ್ಹೋ ಅವನು ಕರ್ಮವನ್ನು ಬಿಡಕೂಡದು. ಯಾವನಿಗೆ ಬ್ರಹ್ಮವೇ ನಾನೆಂಬ ನಿಶ್ಚಯಜ್ಞಾನ ಉಂಟಾಗಲಿಲ್ಲವೋ ಅವನು ಕರ್ಮವನ್ನೇ ಮಾಡಬೇಕು. ಯಾವನಿಗೆ ಕರ್ಮವನ್ನು ಬಿಡುವುದರಿಂದ ನಾನು ಕೆಟ್ಟೆ ನೆಂಬ ಭೀತಿ ತೋರುವುದೋ ಅವನು ಎಂದಿಗೂ ಕರ್ಮವನ್ನು ಬಿಡಕೂಡದು. ವಿಚಾರಕ್ಕೆ ಪೂರ್ವದಲ್ಲಿ ಈ ದೇಹವೇ ನಾನು ಎಂಬ ಭಾವನೆ ಹೇಗೆ ದೃಢವಾಗಿತ್ತೋ ಹಾಗೆ ವಿಚಾರಾನಂತರ ಬ್ರಹ್ಮವೇ ನಾನೆಂಬ ಜ್ಞಾನವು ದೃಢಪಟ್ಟ ಮಹಾತ್ಮನಿಗೆ ಮಾಡತಕ್ಕುದು ಯಾವುದೂ ಇಲ್ಲ. ಈ ವಿಷಯದಲ್ಲಿ ಪ್ರಮಾಣಗಳನ್ನು ಅನೇಕ ವಾಗಿ ಹಿಂದೆ ಹೇಳಿರುತ್ತದೆ. ಆದ್ದರಿಂದ ಜ್ಞಾನಕ್ಕೆ ಮೂಲವಾದ ಕರ್ಮವನ್ನು ಬಿಡಕೂಡದೆಂದು ಮಾಡಿದ ಆಕ್ಷೇಪಣೆ ಸರಿಯಾದುದಲ್ಲ. (ಜ್ಞಾನಿಯು ಸಂಸಾರ ದಲ್ಲಿರಕೂಡದು. ಬಾಹ್ಯವ್ಯಾಪಾರವಿಲ್ಲದೆ ನಿರ್ವಿಕಲ್ಪ ಸಮಾಧಿಯಲ್ಲಿರಬೇಕೆಂಬ ಎರಡಾಕ್ಷೇಪಣೆಗಳಿಗೆ ಸಮಾಧಾನ.) ಪ್ರಾರಬ್ಧ ಕರ್ಮವಶದಿಂದ ಜ್ಞಾನಿಯಾ ದಾಗ್ಯೂ ಸಂಸಾರದಲ್ಲೇ ಇರುತ್ತಾನೆ. (ಪ್ರಾರಬ್ಧಂ ಭೋಗತೋನಶ್ಯೇತ್) (ಪ್ರಾರಬ್ಧಂತ್ವಿಹಭುಜ್ಯತಾಂ ಅವಶ್ಯ ಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ) (ಅಂದರೆ ಪ್ರಾರಬ್ಧವನ್ನು ಅನುಭವಿಸುವುದರಿಂದಲೇನೆ ನಾಶವಾಗತಕ್ಕುದು.) (ಪ್ರಾರಬ್ಧವನ್ನು ಇಲ್ಲಿ ಅನುಭವಿಸಬೇಕು.) (ಪ್ರಾರಬ್ಧ ಕರ್ಮಸಂಬಂಧವಾದ ಸುಖ ದುಃಖಗಳನ್ನು ಅಗತ್ಯವಾಗಿ ಅನುಭವಿಸಬೇಕು.) ಈ ರೀತಿ ಪ್ರಾರಬ್ಧವನ್ನು ಅನು ಭವಿಸೇತೀರಬೇಕಾದ್ದರಿಂದ ಪ್ರಾರಾಬ್ಧಕರ್ಮಾಧೀನರಾಗಿ ಸಂಸಾರದಲ್ಲಾದರೂ ಅಥವಾ ಸರ್ವಸಂಗಪರಿತ್ಯಾಗದಿಂದಲಾದರೂ ಇರುವರು. ಯಾವನ ಪ್ರಾರಬ್ಧವು ಸಂಸಾರದಲ್ಲಿದ್ದುಕೊಂಡು ದುಂಖಿಸಬೇಕೆಂದಿದೆಯೋ ಅವನು ಸಂಸಾರದಲ್ಲೇ

ಇರುತ್ತಾನೆ. ಯಾವನ ಪ್ರಾರಬ್ಧವು ಸರ್ವಸಂಗಪರಿತ್ಯಾಗಮಾಡಿಸುವುದಾಗಿದೆಯೋ ಅವನು ಹಾಗೆಯೇ ಇರುತ್ತಾನೆ. ಈ ಪ್ರಾರಬ್ಧವು (ಇಚ್ಛಾಪ್ರಾರಬ್ಧ, ಅನಿಚ್ಛಾ ಪ್ರಾರಬ್ಧ,ಪರೇಚ್ಛಾಪ್ರಾರಬ್ಧ) ಎಂದು ಮೂರು ವಿಧವಾಗಿರುತ್ತದೆ. ಅಪಥ್ಯಸೇವನೆ ಮಾಡಿದವರೇ ದೇಹಕ್ಕೆ ವ್ಯಾಧಿಯುಂಟಾಗುತ್ತೆಂಬು ತಿಳಿದಿದ್ದರೂ. ಬಿಡದೆ ಅಪಥ್ಯ ವನ್ನು ಮಾಡಿಸುವುದೇ ಇಚ್ಛಾಪ್ರಾರಬ್ಧವು : ಲೋಕದಲ್ಲಿ ದುಷ್ಕಾರ್ಯವನ್ನು ಮಾಡಿ ದರೆ ರಾಜನು ಶಿಕ್ಷಿಸುತ್ತಾನೆ. ದುಷ್ಕಾರ್ಯವನ್ನು ಮಾಡಿದವನಿಗೆ ಆ ಶಿಕ್ಷೆಯನ್ನು ಅನುಭವಸಬೇಕೆಂಬ ಇಚ್ಛೆಯಿಲ್ಲದೆ ಇದ್ದಾಗ್ಯೂ ರಾಜಾಜ್ಞಾ ನಿರ್ಬಂಧದಿಂದ ಅನು ಭವಿಸುವುದೇ ಅನಿಚ್ಛಾಪ್ರಾರಬ್ಧವು ತನಗೆ ಅಪೇಕ್ಷೆ ಇಲ್ಲದೆ ರಾಜಾಜ್ಞಾ ನಿರ್ಬಂಧ ವಿಲ್ಲದೆ, ಪರರ ದಾಕ್ಷಿಣ್ಯಕ್ಕೆ ಅನುಭವಿಸುವ ಸುಖದುಃಖಗಳೇ ಪರೇಚ್ಛಾ ಪ್ರಾರಬ್ಧವು ಈ ತ್ರಿವಿಧ ಪ್ರಾರಬ್ಧವನ್ನು ಬ್ರಹ್ಮಾದಿಗಳು ಕೂಡಾ ಅನುಭವಿಸೇ ತೀರಬೇಕು. ಕರ್ಮವು ಸಂಚಿತ, ಆಗಾಮಿ, ಪ್ರಾರಬ್ಧ ಎಂದು ಮೂರುವಿಧವು. ಇದರಲ್ಲಿ ಅನೇಕಕೋಟಿ ಜನ್ಮಗಳಿಂದ ಅನುಸರಿಸಿ ಮುಂದೆ ನಾನಾ ಜನ್ಮಕ್ಕೆ ಕಾರಣವೆನಿಸಿ ರಾಶಿಯಾಗಿ ಬಿದ್ದಿರುವ ಕರ್ಮವೇ ಸಂಚಿತವೆನಿಸುವುದು. ಈ ಸಂಚಿತ ದಲ್ಲಿ ಕೆಲವು ಭಾಗವು ಈ ದೇಹಸ್ವರೂಪವಾಗಲು ಅದರಲ್ಲಿ ಸುಖದುಃಖಾದಿಗ ಳನ್ನು ಅನುಭವಿಸುವ ಕರ್ಮವೇ ಪ್ರಾರಬ್ಧವೆನಿಸುವುದು. ಮುಂದೆ ಈ ದೇಹ ನಾಶವಾಗುವವರಿಗೂ ಮಾಡುವ ಪುಣ್ಯಪಾಪ ಕರ್ಮಗಳೇ ಆಗಾಮಿ ಎನಿಸುವುದು. ಈ ತ್ರಿವಿಧ ಕರ್ಮಗಳು ಇರುವವರಿಗೂ ಜನ್ಮ ತಪ್ಪುವುದಿಲ್ಲ. ಇವು ಮೂರೂ ನಾಶವಾದರೇನೇ ಮುಕ್ತನಾಗುವುದು. ಇವು ಮೂರಕ್ಕೂ ನಾಶವು ಹೇಗೆಂದರೆ:— ಸಂಚಿತಾಗಾಮಿ ಕರ್ಮಗಳೆರಡೂ ಬ್ರಹ್ಮಜ್ಞಾನದಿಂದ ನಾಶವಾಗುವವು. ದೇಹ ಪತನದವರಿಗೂ ಅನುಭವಿಸೋಣದರಿಂದ ಪ್ರಾರಬ್ಧ ನಾಶವಾಗುವುದು. ಇದರಲ್ಲಿ ಬ್ರಹ್ಮಜ್ಞಾನವಿಲ್ಲದವನಿಗೆ ಪ್ರಾರಬ್ಧವು ದೇಹಪತನದವರಿಗೂ ಅನುಭವಿಸೋಣದ ರಿಂದ ನಾಶವಾದಾಗ್ಯೂ ಸಂಚಿತಗಾಮಿ ಕರ್ಮಗಳಿರುವುದರಿಂದ ಜನ್ಮವುಂಟಾ ಯಿತು. ಜ್ಞಾನಿಗಾದರೋ ಜ್ಞಾನದಿಂದ ಸಂಚಿತಾಗಾಮಿಗಳು ನಾಶವಾಗಲು, ಅನುಭವಿಸೋಣದರಿಂದ ಪ್ರಾರಬ್ಧ ನಾಶವಾಗಲು, ದೇಹಪತನಾನಂತರ ಸಂಚಿತಾ ಗಾಮಿ ಕರ್ಮಗಳಿಲ್ಲದ ಕಾರಣ ದೇಹವುಂಟಾಗುವುದಕ್ಕವಕಾಶವಿಲ್ಲದೇ ಹೋಯಿತು ಯಾವಾಗ ದೇಹವಿಲ್ಲವೊ ಆವಾಗ ಜನ್ಮಕ್ಕೆ ಅವಕಾಶವಿಲ್ಲದೆ ಮುಕ್ತನಾಗುತ್ತಾನೆ. ಹೀಗಿರಲು ಜ್ಞಾನಿಯು ಬಾಹ್ಯಸ್ಮರಣೆಯಿಲ್ಲದೆ ಇರಬೇಕೆಂದು ಹೇಳುವ ಪಕ್ಷದಲ್ಲಿ ಅಗಾಮಿ ಕರ್ಮವನ್ನು ಅಂಗೀಕರಿಸಕೂಡದು. ಆಗಾಮಿ ಕರ್ಮವನ್ನು ಹೇಳಿರು

ವುದಕ್ಕೆ ತಾತ್ಪರ್ಯವೇನೆಂದರೆ:—ಜ್ಞಾನಿಯಾದಾಗ್ಯೂ ಪ್ರಾರಬ್ಧ ಕರ್ಮಾನುಗುಣ್ಯವಾಗಿ ವ್ಯವಹಾರದಲ್ಲೂ ಇರುತ್ತಾನೆಂದು ತಾತ್ಪರ್ಯ. (ಜನಕ, ವಸಿಷ್ಠ, ಯಾಜ್ಞವಲ್ಕ್ಯ, ಶಂಕರಾಚಾರ್ಯ, ವಿದ್ಯಾರಣ್ಯಾದಿ) ಜಾನಿಗಳು ಬಾಹ್ಯ ವ್ಯಾಪಾರವಿಲ್ಲದೆ ಕಲ್ಲಿನಂತೆ ಇರಲಿಲ್ಲ. ನಾನಾ ವ್ಯವಹಾರದಲ್ಲೇ ಇದ್ದರು. ಈ ವಿಷಯವಲ್ಲಿ ಪ್ರಮಾಣವೇನೆಂದರೆ:— ಭಗವದ್ಗೀತೆಯಲ್ಲಿ

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥**

ಬ್ರಹ್ಮಜ್ಞಾನಿಯಾದಾಗ್ಯೂ ತನ್ನ ಪ್ರಾರಬ್ಧಕ್ಕೆ ಅನುಸಾರವಾಗಿ ನಡೆಯುತ್ತಾನೆ. ಸಮಸ್ತ ಪ್ರಾಣಿಗಳೂ ಪ್ರಾರಬ್ಧವನ್ನು ಅನುಸರಿಸುತ್ತಿರುವಲ್ಲಿ ಇವನ ನಿಗ್ರಹವು ಏನುಮಾಡೀತು ? ಉತ್ತರಗೀತೆಯಲ್ಲಿ—

**ಜ್ಞಾತ್ವಾ ಸರ್ವಗತಂ ಬ್ರಹ್ಮ ಸರ್ವಭೂತನಿ ವಾಸಿತಂ ।**
**ಇಂದ್ರಿಯಾಣಾಂ ನಿರೋಧೇನ ಕಥಂ ಸಿಧ್ಯಂತಿ ಯೋಗಿನಃ ॥**
**ತಾವದೇವ ನಿರೋಧಸ್ಯಾಹ್ಯಾವತ್ತತ್ತ್ವಂ ನ ವಿಂದತಿ ।**
**ವಿದಿತೇತು ಪರೇತತ್ವೇಹ್ಯೇಕಮೇವಾನುಪಶ್ಯತಿ ॥**

ಸರ್ವಭೂತ ನಿವಾಸಿತವಾಗಿಯೂ, ಸರ್ವವ್ಯಾಪಕವಾಗಿಯೂ ಇರುವ ಬ್ರಹ್ಮವನ್ನು ತಿಳಿದನಂತರ ಇಂದ್ರಿಯ ನಿಗ್ರಹ ಮಾಡುವುದರಿಂದ ಯೋಗಿಗಳು ಹೇಗೆ ಸಿದ್ಧರಾಗುವರು ? ಎಲ್ಲಿಯವರಿವಿಗೆ ತನ್ನ ಸ್ವರೂಪ ತಿಳಿಯಲಿಲ್ಲವೋ ಅಲ್ಲಿಯವರಿಗೆ ಆಂದ್ರಿಯ ನಿರೋಧ ಸ್ವರೂಪಜ್ಞಾನವಾದಮೇಲೆ ಎಲ್ಲಾ ಬ್ರಹ್ಮವೇ ಎಂದು ನೋಡುತ್ತಾನೆ.

**ಕೂಟಸ್ಥಾನೀಹ ಕರ್ಮಾಣಿ ಕೋಟಿಜನ್ಮಾರ್ಜಿತಾನ್ಯಪಿ ।**
**ಜ್ಞಾನೇನೈವ ವಿನಶ್ಯಂತಿ ನತುಕರ್ಮಾಯುಕ್ತೈರಪಿ ॥**
**ಜ್ಞಾನಾಧೂರ್ಧ್ವಂಹಿಯತ್ಕಿಂಚಿತ್ಪುಣ್ಯಂ ವಾ ಪಾಪಮೇವವ ।**
**ಕ್ರಿಯತೇಬಹುವಾಲ್ಪಂ ವಾ ನತೇನಾಯಂ ವಿಲಿಪ್ಯತೇ ॥**
**ಶರೀರಾರಂಭಕಂ ಯತ್ತು ಪ್ರಾರಾಬ್ಧಂ ಕರ್ಮತನ್ಮತಂ ।**
**ತದ್ಭೋಗೇನೈವ ನಷ್ಟಂ ಸ್ಯಾನ್ನತುಜ್ಞಾನೇವ ನಶ್ಯತಿ ॥**
**ಕ್ಷೀರಾದುಧೃತಮಾಜ್ಯಂ ಯತ್ ಕ್ಷಿಪ್ತಂ ಪಯಸಿ ತತ್ಪುನಃ ।**
**ನತೇ ನೈನ್ಯೆ ಕತಾಂ ಯಾತಿ ಸಂಸಾರೇ ಜ್ಞಾನವಾ ತಥಾ ॥**
**ವೃಕ್ಷಾಗ್ರಾಚ್ಯುತಪಾದೋಯಸ್ಸತದೈವ ಪತತ್ಯಧಃ ।**
**ತದ್ವದ್ ಜ್ಞಾನವತೋ ಮುಕ್ತಿರ್ಜಾಯತೇ ನಿಶ್ಚಿತಾಪಿಹಿ ॥**

ಆತ್ಮಜ್ಞಾನವುಂಟಾಗುವವರೆವಿಗೂ ಹಿಂದೆ ಕೋಟಿಜನ್ಮಗಳಿಂದ ಮಾಡಲ್ಪಟ್ಟ ಪುಣ್ಯ ಪಾಪಕರ್ಮಗಳೆಲ್ಲಾ ಆತ್ಮಜ್ಞಾನದಿಂದಲೇ ನಾಶವಾಗತಕ್ಕದ್ದು. ಹತ್ತುಸಹಸ್ರ ಕರ್ಮಗಳನ್ನು ಮಾಡಿದಾಗ್ಯೂ ಇದು ನಾಶವಾಗುವುದಿಲ್ಲ. ಆತ್ಮಜ್ಞಾನ ಉಂಟಾದನಂತರ ದೇಹ ನಾಶದವರೆವಿಗೂ ಪುಣ್ಯವೇ ಮಾಡಲಿ, ಪಾಪವೇ ಮಾಡಲಿ, ಅದು ಅಲ್ಪವಾಗಿಯೇ ಇರಲಿ ಬಹಳವಾಗಿಯೇ ಇರಲಿ ಆ ಕರ್ಮಗಳಿಂದ ಜ್ಞಾನಿಯು ಲಿಪ್ತನಾಗುವುದಿಲ್ಲ. ಶರೀರ ಬರುವುದಕ್ಕೆ ಕಾರಣವಾದ ಯಾವ ಕರ್ಮವುಂಟೋ ಅದು ಪ್ರಾರಬ್ಧವೆನಿಸುತ್ತದೆ. ಈ ಪ್ರಾರಬ್ಧವು ಅನುಭವಿಸೋಣದರಿಂದ ನಾಶವಾಗಬೇಕಾಗಿದೆ. ಜ್ಞಾನದಿಂದ ನಾಶವಾಗದು. ಹಾಲನ್ನು ಕಡದು ಹಾಲಿನಿಂದ ಬೇರ್ಪಡಿಸಲ್ಪಟ್ಟ ಬೆಣ್ಣೆಯು ಪುನಶ್ಚ ಹಾಲಿನಲ್ಲೇ ಹಾಕಲ್ಪಟ್ಟರೂ ಮೊದಲಿನಂತೆ ಹಾಲಿನಲ್ಲಿ ಹೇಗೆ ಹೊಂದುವುದಿಲ್ಲವೋ ಹಾಗೆಯೇ ಆತ್ಮಜ್ಞಾನಿಯು ಸಂಸಾರದಲ್ಲಿದ್ದರೂ ಸಂಸಾರಕರ್ಮವು ಜ್ಞಾನಿಗೆ ಅಂಟುವುದಿಲ್ಲ. ಮರದ ಕೊಂಬೆಯಮೇಲೆ ನಿಂತಿರುವ ಮನುಷ್ಯನು ಕಾಲು ಜಾರಿದರೆ ತಕ್ಷಣವೇ ಮರದಮೇಲೆ ನಿಲ್ಲದೆ ಕೆಳಕ್ಕೆ ಹೇಗೆ ಬೀಳುವನೋ ಅದರಂತೆ ಮನುಷ್ಯನಿಗೆ ದೃಢಜ್ಞಾನ ಉಂಟಾದ ಕ್ಷಣವೇ ಮುಕ್ತನಾಗುತ್ತಾನೆ. ಇದಲ್ಲದೆ ಜ್ಞಾನಿಗೆ ಪುಣ್ಯಕ್ಷೇತ್ರದಲ್ಲಿಯೇ ದೇಹ ನಾಶವಾಗಬೇಕು. ಸಾಯುವ ಕಾಲದಲ್ಲಿ ಆತ್ಮಜ್ಞಾನವೇ ಇರಬೇಕೆಂಬ ನಿರ್ಬಂಧವಿಲ್ಲ. ಈ ನಿರ್ಬಂಧವೆಲ್ಲಾ ಉಪಾಸಕರಿಗೇನೆ.

ಇದಕ್ಕೆ ಪ್ರಮಾಣ ಶಿವಗೀತೆಯಲ್ಲಿ—

**ತೀರ್ಥೇ ಚಂಡಾಲಗೇಹೇ ವಾಯದಿವಾ ನಷ್ಟ ಚೇತನಃ ।**
**ಪರಿತ್ಯಜ್ಯ ದೇಹಮಿಮಂ ಜ್ಞಾನಾದೇವವಿಮುಚ್ಯತೇ ॥**

ಪುಣ್ಯಕ್ಷೇತ್ರದಲ್ಲಾಗಲಿ, ಚಂಡಾಲನ ಮನೆಯೊಳಗಾಗಲಿ, ಜ್ಞಾನದಿಂದಾಗಲಿ, ಸ್ಮೃತಿ ಇಲ್ಲದೆಯೇ ಆಗಲಿ ಜ್ಞಾದಿಗೆ ದೇಹತ್ಯಾಗವಾದರೂ ಯಾವಾಗ ಆತ್ಮಜ್ಞಾನ ಉಂಟಾಯಿತೋ ಆಗಲೇ ಮುಕ್ತನಾಗಿರುತ್ತಾನೆ.

ತತ್ವಾನುಸಂಧಾನವೆಂಬ ಗ್ರಂಥದಲ್ಲಿ—

**ತೀರ್ಥೇ ಶ್ವಪಚಗೃಹೇ ವಾ ನಷ್ಟ ಸ್ಮೃತಿರಪಿ ಪರಿತ್ಯಜ್ಯ ದೇಹಂ ।**
**ಜ್ಞಾನಸಮಕಾಲ ಮುಕ್ತಃ ಕೈವಲ್ಯಂ ಯಾತಿ ಹತಶೋಕಃ ॥**

ಜ್ಞಾನಿಗೆ ತೀರ್ಥದಲ್ಲೇ ಆಗಲಿ, ಚಂಡಾಲನ ಗೃಹದಲ್ಲಾಗಲಿ ಸ್ಮೃತಿ ತಪ್ಪೇ ಆಗಲಿ ದೇಹ ನಾಶವಾದರೂ ಜ್ಞಾನ ಉಂಟಾದ ಕಾಲದಲ್ಲೇ ಮುಕ್ತನೆಂದು ತಾತ್ಪರ್ಯ.

ಶಿವಗೀತೆಯಲ್ಲಿ—

**ಸಂವಿತೋ ಯೇನಕೇನಾಶ್ನರ್ ಭಕ್ಷ್ಯಂ ವಾ ಭಕ್ಷ್ಯಮೇವವ।**
**ಶಯಾನೋ ಯತ್ರ ಕುತ್ರಾಪಿ ಸರ್ವಾತ್ಮಾ ಮುಚ್ಯತೇಹಿಸಃ ॥**

ಜ್ಞಾನಿಯು ಯಾವುದರಿಂದಲಾದರೂ ಕೂಡಿರಲಿ, ತಿನ್ನಬಾರದ್ದು ತಿನ್ನಲಿ, ಎಲ್ಲಾದರೂ ಮಲಗಿರಲಿ ಸರ್ವಪ್ರಕಾರದಿಂದಲೂ ಅವನು ಮುಕ್ತನೆ.

ಶಂಕರಾಚಾರ್ಯ ವಿರಚಿತ ವಿವೇಕಚೂಡಾಮಣಿಯಲ್ಲಿ—

**ಕ್ವಚಿನ್ಮೂಢೋ ವಿದ್ವಾರ್ ಕ್ವಚಿದಪಿ ಮಹಾರಾಜ ವಿಭವಃ।**
**ಕ್ವಚಿದ್ಭ್ರಾಂತಸ್ಸೌಮ್ಯಃ ಕ್ವಚಿದಜಗರಾ ಚಾರಕಲಿತಃ ॥**
**ಕ್ವಚಿತ್ಪಾತ್ರೀ ಭೂತಃ ಕ್ವಚಿದವಮತಃಕ್ವಾಪ್ಯವಿದಿತಃ।**
**ಚರತ್ಯೇವಂ ಪ್ರಾಜ್ಞಾಸ್ಸತತ ಪರಮಾನಂದಸುಖಿತಃ ॥**

ಜ್ಞಾನಿಯು ಪ್ರಾರಬ್ಧಕರ್ಮಾನುಗುಣವಾಗಿ ಮೂಢನಾಗಿಯೂ, ವಿದ್ವಾಂಸನಾಗಿಯೂ, ಮಹಾವೈಭವದಿಂದ ಕೂಡಿದವನಾಗಿಯೂ, ಭ್ರಾಂತನಾಗಿಯೂ, ಸೌಮ್ಯನಾಗಿಯೂ, ಅಜಗರಾಚಾರದಿಂದ ಕೂಡಿದವನಾಗಿಯೂ, ಶತ್ಪಾತ್ರನಾಗಿಯೂ, ಅವಮಾನವುಳ್ಳವನಾಗಿಯೂ, ತಿಳಿಯದೇ ಇರುಪವನಾಗಿಯೂ ಈ ರೀತಿ ಸಂಚರಿಸುತ್ತಿರುತ್ತಾ ಪರಮಾನಂದದೊಳಗಿರುವನು:

**ಅಪಿ ಕುರ್ವನ್ನ ಕುರ್ವಾಣಶ್ಚಾ ಭೋಕ್ತಾ ಫಲಭೋಗ್ಯಪಿ।**
**ಶರೀರ್ಯಪ್ಯ ಶರೀರ್ಯೇಷ ಪರಿಚ್ಛಿನ್ನೋಽಪಿ ಸರ್ವಗಃ ॥**
**ಆಶರೀರಂ ಸದಾ ಸಂತಮಿಮಂ ಬ್ರಹ್ಮವಿದಂ ಕ್ವಚಿತ್ ।**
**ಪ್ರಿಯಾ ಪ್ರಿಯೇನ ಸ್ಪೃಶತಸ್ತಥೈವ ಚ ಶುಭಾಶುಭೇ ॥**

ಜ್ಞಾನಿಯು ಪಾಪಪುಣ್ಯಕರ್ಮಗಳನ್ನು ಮಾಡಿಯೂ ಮಾಡದವನು ; ಊಟ ಮಾಡಿದರೂ ಮಾಡದವನು ; ಶರೀರವಿದ್ದಾಗ್ಯೂ ದೇಹವಿಲ್ಲದವನು ; ಒಂದುಕಡೆ ಇದ್ದವನಾದಾಗ್ಯೂ ಜಗದ್ವ್ಯಾಪಕನು ; ಶರೀರಸಂಬಂಧವಿಲ್ಲದ ಬ್ರಹ್ಮಜ್ಞಾನಿಯನ್ನು ಸುಖದುಃಖಗಳೂ ಪುಣ್ಯಪಾಪಗಳೂ ಅಂಟುವುದಿಲ್ಲ.

**ತಮಸಾಗ್ರಸ್ತವದ್ಭಾಸುರಗ್ರಸ್ತೋ ಪಿರವಿರ್ಜ್ಞನೈಃ।**
**ಗ್ರಸ್ತ ಇತ್ಯುಚ್ಯತೇ ಭ್ರಾಂತ್ಯಾಹ್ಯಜ್ಞಾತ್ವಾ ವಸ್ತುಲಕ್ಷಣಂ ॥**
**ತದ್ವದ್ದೇಹಾದಿ ಬಂಧೇಭ್ಯೋ ವಿಮುಕ್ತಂ ಬ್ರಹ್ಮವಿತ್ತಮಂ।**
**ಪಶ್ಯಂತಿ ದೇಹವನ್ಮೂಢಾಃ ಶರೀರಾ ಭಾಸ ದರ್ಶನಾತ್ ॥**

ರಾಹುವಿನಿಂದ ಹಿಡಿಯಲ್ಪಟ್ಟವನಂತೆ ಕಾಣುವುದರಿಂದ ಸೂರ್ಯಸ್ವರೂಪವನ್ನು ತಿಳಿಯದೆ ರಾಹುವಿನಿಂದ ಸೂರ್ಯನು ಗ್ರಸ್ತನಾಗಿದ್ದಾನೆಂದು ಅಜ್ಞಾನ

ದಿಂದ ಹೇಗೆ ಹೇಳುತ್ತಾರೋ, ಅದರಂತೆ ದೇಹಾದಿಗಳ ಬಂಧನಕ್ಕೆ ಸಿಲುಕದಿರುವ ಜ್ಞಾನಿಯನ್ನು ಶರೀರಕರ್ಮವನ್ನು ನೋಡಿ ಇವನು ನಮ್ಮಂತೆ ಮನುಷ್ಯನೆಂದು ಮೂಢರಾಗುತ್ತಾರೆ.

**ಪ್ರಾರಬ್ಧಕರ್ಮ ಪರಿಕಲ್ಪಿತ ವಾಸನಾಭಿಸ್ಸಂಸಾರಿವಚ್ಚರತಿ ಭುಕ್ತಿಷು**
**ಮುಕ್ತದೇಹಃ । ಸಿದ್ಧಸ್ಸ್ವಯಂ ವಸತಿ ಸಾಕ್ಷಿವದತ್ರ ತೂಷ್ಣೀಂ**
**ಚಕ್ರಸ್ಯಮೂಲಮಿವಕಲ್ಪವಿಕಲ್ಪ ಶೂನ್ಯಃ ॥**

ಜ್ಞಾನಿಯು ಪ್ರಾರಬ್ಧಕರ್ಮವಾಸನಾಬಲದಿಂದ ಸುಖದುಃಖಾನುಭವಗಳ ವಿಷಯದಲ್ಲಿ ಸಂಸಾರಿಯಂತೆ ಆಚರಿಸುತ್ತಾನೆ. ಆದರೂ ಅವನು ಬಂಡಿಯ ಚಕ್ರ ತಿರುಗಿದರೂ ಅದರೊಳಗೆ ಸೇರಿರುವ ಅಚ್ಚು ಹೇಗೆ ತಿರುಗದೇ ನಿರ್ವಿಕಾರಿಯಾಗಿರುತ್ತೋ ಅದರಂತೆ ದೇಹೇಂದ್ರಿಯ ಕರಣಾದಿಗಳ ಕರ್ಮಕ್ಕೆ ಸಾಕ್ಷಿಯಾಗಿರುತ್ತಾನೆ.

**ಶೈಲೂಷೋ ವೇಷಸದ್ಭಾವಾ ಭಾವಯೋಶ್ಚಯಥಾಪುಮಾ೯ ।**
**ತಥೈವ ಬ್ರಹ್ಮವಿಚ್ಛ್ರೇಷ್ಠಃ ಸದಾ ಬ್ರಹ್ಮೈವನಾಪರಃ ॥**

ನಾಟಕದಲ್ಲಿ ಸ್ತ್ರೀ ವೇಷವನ್ನು ಧರಿಸತಕ್ಕವನು ವೇಷವನ್ನು ಧರಿಸಿದ ಕಾಲದಲ್ಲೂ ವೇಷವನ್ನು ಧರಿಸುವುದಕ್ಕೆ ಮುಂಚೆಯೂ ಹೇಗೆ ಗಂಡಸೇ ಆಗಿರುತ್ತಾನೋ, ಅದರಂತೆ ಜ್ಞಾನಿಯು ಲೋಕವ್ಯವಹಾರದಲ್ಲಿರುವ ಕಾಲದಲ್ಲೂ ವಿಚಾರದಲ್ಲಿರುವ ಕಾಲದಲ್ಲೂ ಬ್ರಹ್ಮವೇ ಆಗಿದ್ದಾನೆ.

ಈ ರೀತಿ ಪ್ರಾರಬ್ಧಕರ್ಮದಿಂದ ಜ್ಞಾನಿಯೂ ನಾನಾವಿಧವಾಗಿರುತ್ತಾನೆ. ಆದ್ದರಿಂದ ಲೋಕವ್ಯವಹಾರವಿಲ್ಲದೆ ಜ್ಞಾನಿಯಾದವನು ನಿರ್ವಿಕಲ್ಪ ಸಮಾಧಿಯಲ್ಲೇ ಇರಬೇಕೆಂದು ಮಾಡಿದ ಆಕ್ಷೇಪ ಸರಿಯಾದ್ದಲ್ಲ. ಇನ್ನು ಶಾಪಾನುಗ್ರಹ ಸಾಮರ್ಥ್ಯವಿಲ್ಲದವನು ಜ್ಞಾನಿಯು ಹೇಗಾದನೆಂದು ಮಾಡಿದ ಆಕ್ಷೇಪಕ್ಕೆ ಸಮಾಧಾನ—ಶಾಪನುಗ್ರಹ ಸಾಮರ್ಥ್ಯವು ತಪಸ್ಸಿನ ಶಕ್ತಿಯೇ ಹೊರತು ಜ್ಞಾನದಿಂದ ಶಾಪಾನುಗ್ರಹ ಸಾಮರ್ಥ್ಯ ಉಂಟಾಗುವುದಿಲ್ಲ. ವ್ಯಾಸಾದಿಗಳಿಗೆಲ್ಲಾ ತಪಶ್ಶಕ್ತಿಯು ಇದ್ದದ್ದರಿಂದ ಶಾಪಾನುಗ್ರಹ ಸಾಮರ್ಥ್ಯ ಉಂಟಾಗಿತ್ತು. ತಪಸ್ಸು, ಜ್ಞಾನ ಎರಡೂ ಉಳ್ಳವರಿಗೆ ಇಹದಲ್ಲಿ ಶಾಪಾನುಗ್ರಹಶಕ್ತಿಯೂ, ಪರದಲ್ಲಿ ಮೋಕ್ಷವೂ ಇವೆರಡೂ ಉಂಟಾಗುತ್ತದೆ. ಇದಕ್ಕೆ ಪ್ರಮಾಣ :
ವಿದ್ಯಾರಣ್ಯಕೃತ ಪಂಚದಶಿಯಲ್ಲಿ—

**ಶಾಪಾನುಗ್ರಹ ಸಾಮರ್ಥ್ಯಂ ಯಸ್ಯಾಸೌ ತತ್ಪ ವಿದ್ಯದಿ ।**
**ತನ್ನಶಾಪಾದಿ ಸಾಮರ್ಥ್ಯ ಫಲಂಸ್ಯಾತ್ತಪಸೋ ಯಥಾ ॥**

**ವ್ಯಾಸಾದೇರಪಿ ಸಾಮರ್ಥ್ಯಂ ದೃಶ್ಯತೇ ತಪಸೋಬಲಾತ್ ।**
**ಶಾಪಾದಿಕಾ ಣಂಹ್ಯನ್ಯತ್ರಪ್ರೋಜ್ಞಾನಸ್ಯ ಕಾರಣಂ ॥**
**ದ್ವಯೋರ್ಯಸ್ಯಾಸ್ತಿ ತಸ್ಯೈವ ಸಾಮರ್ಥ್ಯಜ್ಞಾನಯೋರ್ಜನಿಃ ।**
**ಏಕೈಕಂತು ತಪಃ ಕುರ್ವನ್ನೇಕೈಕಂ ಲಭತೇ ಫಲಂ ॥**

ಶಾಪಾನುಗ್ರಹ ಸಾಮರ್ಥ್ಯವುಳ್ಳವನೇ ತತ್ವಜ್ಞನೆಂದು ಹೇಳಕೂಡದು. ಏಕೆಂದರೆ—ಶಾಪಾನುಗ್ರಹ ಸಾಮರ್ಥ್ಯ ತಪಸ್ಸಿನ ಫಲವೇ ವಿನಹ ಜ್ಞಾನದ ಫಲವಲ್ಲದ್ದರಿಂದ ವ್ಯಾಸಾದಿಗಳಿಗೆ ಶಾಪಾನುಗ್ರಹ ಸಾಮರ್ಥ್ಯವು ತಪೋಬಲದಿಂದಲೇ ಉಂಟಾಗಿತ್ತು. ಶಾಪಾನುಗ್ರಹ ಉಂಟಾಗತಕ್ಕ ತಪಸ್ಸೇ ಬೇರೆ. ಜ್ಞಾನವುಂಟಾಗತಕ್ಕ ತಪಸ್ಸೇ ಬೇರೆ. ಯಾರಿಗೆ ಉಭಯ ವಿಧವಾದ ತಪಸ್ಸೂ ಇರುತ್ತದೆಯೋ ಅವರಿಗೆ ಶಾಪಾನುಗ್ರಹ ಶಕ್ತಿಜ್ಞಾನಗಳೆರಡೂ ಉಂಟಾಗುತ್ತದೆ. ಒಂದಿರತಕ್ಕವರಿಗೆ ಒಂದೊಂದೇ ಸಿದ್ಧಿಸುತ್ತೆ. ಆದ್ದರಿಂದ ಶಾಪಾನುಗ್ರಹ ಸಾಮರ್ಥ್ಯವಿರತಕ್ಕವನೇ ಜ್ಞಾನಿಯೆಂದು ಮಾಡಿದ ಆಕ್ಷೇಪವು ಸರಿಯಾದುದಲ್ಲ. ವ್ಯವಹಾರಕಾಲದಲ್ಲಿ ಜ್ಞಾನಿಯೂ ಕೂಡ ಅಜ್ಞಾನಿಯಂತಲೇ ಇರುತ್ತಾನೆಂದು ಬ್ರಹ್ಮಸೂತ್ರಭಾಷ್ಯದ ಎರಡನೇ ಅಧ್ಯಾಯದಲ್ಲಿ ಹೇಳಿದೆ.

ಶಿಷ್ಯ—ಸ್ವಾಮಿ ! ಪ್ರಾರಬ್ಧಕರ್ಮವು ಪಾಪಕರ್ಮಗಳನ್ನೇ ಮಾಡಿಸುತ್ತೋ ? ಪುಣ್ಯಕರ್ಮಗಳನ್ನೇ ಮಾಡಿಸುತ್ತೋ ? ಗೊತ್ತಿಲ್ಲ. ಪ್ರಾರಬ್ಧ ಕರ್ಮದಿಂದುಂಟಾಗುವ ಪುಣ್ಯಕರ್ಮ ಪಾಪಕರ್ಮಗಳೂ, ಸುಖದುಃಖಗಳೂ ಸಹ, ಜ್ಞಾನಿಗೂ ಅಜ್ಞಾನಿಗೂ ಸಮವೇ ಎಂದು ಹೇಳಿದಿರಿ. ಪ್ರಾರಬ್ಧ ಕರ್ಮವಶದಿಂದ ದೇಹಪತನಾವಧಿ ಮಾಡತಕ್ಕ ಪುಣ್ಯ ಪಾಪ ಕರ್ಮಗಳ ಫಲವು ಜ್ಞಾನಿಗುಂಟಾಗುವುದೋ ಇಲ್ಲವೊ ಅವನ್ನು ಅಪ್ಪಣೆ ಕೊಡಿಸಬೇಕು.

ಗುರು—ಅನಾತ್ಮಗಳಾದ ದೇಹೇಂದ್ರಿಯಕರಣಾದಿಗಳು ಮಾಡತಕ್ಕ ಕರ್ಮಗಳನ್ನು ಅಜ್ಞಾನಿಯು ನಾನು ಮಾಡಿದೆನೆಂಬುದಾಗಿ ಕರ್ತೃತ್ವವನ್ನು ತನ್ನಮೇಲೆ ಆರೋಪಿಸಿಕೊಳ್ಳುತ್ತಾನಾಗಿ ಆ ಪಾಪ ಪುಣ್ಯಕರ್ಮಗಳಿಗೆ ತಾನು ಗುರಿಯಾಗುತ್ತಾನೆ. ಜ್ಞಾನಿಯಾದರೊ ಈ ಶರೀರವು ಪ್ರಾರಬ್ಧಜನ್ಯವಾದದ್ದು, ಈ ದೇಹಕ್ಕೆ ಸಂಬಂಧಪಟ್ಟ ಕರಣೇಂದ್ರಿಯಗಳು ಘಟ ಪ್ರಾರಬ್ಧಾನುಸಾರ ಪುಣ್ಯವನ್ನೇ ಮಾಡಲಿ ಪಾಪವನ್ನೇ ಮಾಡಲಿ ನನಗೆ ಅದರ ಸಂಬಂಧವಿಲ್ಲ ಎಂದು ಕರ್ತೃತ್ವವನ್ನು ತನ್ನಮೇಲೆ ಹಾಕಿಕೊಳ್ಳದೆ ನಾನು ಅಸಂಗಚಿನ್ಮಾತ್ರನೆಂಬ ದೃಢನಿಶ್ಚಯದಿಂದಿರುತ್ತಾನೆ. ಜ್ಞಾನಿಗೆ ಈ ಕರ್ಮಗಳ ಲೇಪವಿಲ್ಲ. ಯಾವನು ಅನಾತ್ಮಗಳಾದ

ದೇಹೇಂದ್ರಿಯಾದಿಗಳಿಂದ ಮಾಡಲ್ಪಟ್ಟ ಕರ್ಮಗಳನ್ನು ನಾನು ಮಾಡಿದೆನೆಂದು ಕರ್ತೃತ್ವವನ್ನು ತನ್ನಮೇಲೆ ಹಾಕಿಕೊಳ್ಳುತ್ತಾನೋ ಅವನೇ ಅಜ್ಞಾನಿ. ಅವನಿಗೆ ಜನನ ಮರಣ ದುಃಖವೆಂದಿಗೂ ತಪ್ಪಿದ್ದಲ್ಲ. ಈ ವಿಷಯದಲ್ಲಿ ಪ್ರಮಾಣ ವೇನೆಂದರೆ— ಭಗವದ್ಗೀತೆ ದ್ವಿತೀಯಾಧ್ಯಾಯದಲ್ಲಿ—

**ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಂ ।**
**ಉಭೌತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥**

ಜನಗಳನ್ನು ಈ ಜೀವನು ಕೊಲ್ಲುತ್ತಾನೆ. ಮತ್ತು ಈ ಜೀವನು ಒಬ್ಬರಿಂದ ಕೊಲ್ಲಲ್ಪಡುತ್ತಾನೆಂದು ಯಾವನು ತಿಳಿಯುತ್ತಾನೋ ಇವರಿಬ್ಬರೂ ಮೂಢರು. ಜೀವನು ಕೊಲ್ಲತಕ್ಕವನೂ ಅಲ್ಲ ; ಕೊಲ್ಲಲ್ಪಡುವನೂ ಅಲ್ಲ ;

ಮೂರನೇ ಅಧ್ಯಾಯದಲ್ಲಿ—

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥**
**ತತ್ವವಿತ್ತು ಮಹಾಬಾಹೋ ಗುಣಕರ್ಮ ವಿಭಾಗಯೋಃ ।**
**ಗುಣಾಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥**

ಮಾಯೆಯಿಂದ ಉತ್ಪನ್ನವಾದ ದೇಹೇಂದ್ರಿಯ ಕರಣಾದಿಗಳಿಂದ ಮಾಡಲ್ಪಟ್ಟ ಪುಣ್ಯ ಪಾಪಕರ್ಮಗಳನ್ನು ಮೂಢನು ನಾನು ಮಾಡಿದೆನೆಂದು ತಿಳಿಯುತ್ತಾನೆ. ತತ್ವಜ್ಞಾನಿಯಾದರೋ ಗುಣ ಕರ್ಮಗಳನ್ನು ಬೇರ್ಪಡಿಸುವ ವಿಷಯದಲ್ಲಿ ದೇಹೇಂದ್ರಿಯ ಕರಣಗಳು ತಮ್ಮತಮ್ಮ ವ್ಯಾಪಾರಗಳಲ್ಲಿ ಪ್ರವರ್ತಿಸುತ್ತವೆಂದು ತಿಳಿದು ಆ ಕರ್ಮಗಳಿಗೆ ತಾನು ಸಿಕ್ಕುವುದಿಲ್ಲ. ಐದನೇ ಅಧ್ಯಾಯದಲ್ಲಿ—

**ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥**
**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ ನಿಮಿಷನ್ನಪಿ ।**
**ಇಂದಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥**
**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥**

ನೋಡಿಯೂ, ಕೇಳಿಯೂ, ಮುಟ್ಟಿಯೂ, ಮೂಸಿನೋಡಿಯೂ, ಊಟ ಮಾಡಿಯೂ, ಸಂಚರಿಸಿಯೂ, ಮಲಗಿಯೂ, ಉಸುರುಬಿಟ್ಟವನಾಗಿಯೂ, ಮಾತಾಡಿದವನಾಗಿಯೂ, ಬಿಟ್ಟವನಾಗಿಯೂ, ಹಿಡಿದವನಾಗಿಯೂ, ಕಣ್ಣು ಮುಚ್ಚಿದವನಾಗಿಯೂ, ತೆರದವನಾಗಿಯೂ ಕೂಡ ಇಂದ್ರಿಯಾದಿಗಳು ತಮ್ಮ

ತಮ್ಮ ಕಾರ್ಯಗಳಲ್ಲಿ ಪ್ರವರ್ತಿಸುವವೇ ವಿನಹ ನಾನು ಇದೊಂದೂ ಮಾಡತಕ್ಕವ ನಲ್ಲವೆಂದು ತತ್ವಜ್ಞನು ತಿಳಿಯಬೇಕು. ೧೪ನೇ ಅಧ್ಯಾಯದಲ್ಲಿ—

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತದಾತ್ಮಾನಮಕರ್ತಾರಂಸಪಶ್ಯತಿ ॥**

ಯಾವನು ಸರ್ವಪ್ರಕಾರದಲ್ಲೂ ಕರ್ಮಗಳು ಮಾಯೆಯಿಂದಲೇ ಮಾಡಲ್ಪಡು ತ್ತವೆಂದು ಯಾವಾಗ್ಗೆ ತಿಳಿಯುವನೋ ಆವಾಗ್ಯೆ ತನ್ನನ್ನು ಅಕರ್ತೃವೆಂದು ತಿಳಿಯುತ್ತಾನೆ. ೧೮ನೇ ಅಧ್ಯಾಯದಲ್ಲಿ—

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರಪಂಚಮಂ ॥**
**ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂವಾ ಪಂಚೈತೇ ತಸ್ಯ ಹೇತವಃ ॥**
**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನಸ ಪಶ್ಯತಿ ದುರ್ಮತಿಃ ॥**
**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾಁ ಲೋಕಾನ್ನಹಂತಿ ನ ಬಧ್ಯತೇ ॥**

ಕರ್ಮಮಾಡುವುದಕ್ಕೆ (ಶರೀರ, ಅಹಂಕಾರ, ಕರಣಗಳು, ಶ್ರೋತ್ರಾದೀಂ ದ್ರಿಯಗಳು ಸೂರ್ಯಾದ್ಯಧಿಷ್ಠಾನ ದೇವತೆ) ಇವೈದೇ ಕಾರಣವು. ಅಂದರೆ—ಎಲ್ಲ ಕರ್ಮವನ್ನು ಇವೈದೇ ಮಾಡತಕ್ಕವು. ಮನುಷ್ಯನು ಮಾನೋವಾಕ್ಕಾಯಗಳಿಂದ ಪುಣ್ಯಕರ್ಮವನ್ನೇ ಮಾಡಲಿ, ಪಾಪವನ್ನೇ ಮಾಡಲಿ, ಆ ಕರ್ಮಕ್ಕೆ ಇವೈದೇ ಕಾರ ಣವು. ಈ ಕರ್ಮ ಮಾಡುವ ವಿಷಯದಲ್ಲಿ ಕಾರಣವು ಹೀಗಿರಲು ಈ ಕರ್ಮಗಳನ್ನು ನಾನು ಮಾಡಿದವನೆಂದು ಯಾವನು ನೋಡುತ್ತಾನೊ ಅವನು ಜ್ಞಾನವಿಲ್ಲದ್ದರಿಂದ ದುರ್ಬುದ್ಧಿಯುಳ್ಳವನಾಗಿ ಆತ್ಮ ತತ್ವವನ್ನು ತಿಳಿಯಲಾರನು. ಯಾವನಿಗೆ ನಾನು ಮಾಡಿದೆನೆಂಬ ಭಾವನೆ ಇರುವುದಿಲ್ಲವೋ, ಕರಣೇಂದ್ರಿಯಾದಿಗಳಿಂದ ಮಾಡಲ್ಪಟ್ಟ ಕರ್ಮದಲ್ಲಿ ನಾನು ಮಾಡಿದೆನೆಂದು ಯಾವನ ಬುದ್ಧಿಲೇಪಿಸುವುದಿಲ್ಲವೋ ಅವನು ಲೋಕವನ್ನೆಲ್ಲಾ ಕೊಂದರೂ, ಎಂತಹ ಪಾಪಗಳನ್ನು ಮಾಡಿದರೂ ಅವನು ಕೊಂದವನಲ್ಲ. ಆ ಪಾಪದಿಂದ ಬದ್ಧನೂ ಆಗುವುದಿಲ್ಲ.

ಶಂಕರವಿರಚಿತ ಮಹಾವಾಕ್ಯದರ್ಪಣದಲ್ಲಿ—

**ಸಂಕಲ್ಪೋಪಿ ವಿಕಲ್ಪಃ ಕಾಮಃ ಕ್ರೋಧೋ ಭಯಂ ವಿಷಾದಶ್ಚ ।**
**ಮನಸೋಹ್ಯೇತೆ ಧರ್ಮಾನ್ನೈವ ದ್ರಷ್ಟುಃಶ್ಚಿದಾತ್ಮನಃ ಕೋಪಿ ॥**

ಸಂಕಲ್ಪ, ವಿಕಲ್ಪ, ಕಾಮ, ಕೋಪ, ಭಯ, ದುಃಖ, ಇವೆಲ್ಲಾ ಮನಸ್ಸಿನ ಧರ್ಮಗಳೇ ಹೊರ್ತು ಇವುಗಳನ್ನು ನೋಡುತ್ತಿರುವ ಜೀವಾತ್ಮನಿಗಿಲ್ಲ.

**ಜನ್ಮ ಮೃತ್ಯು ಜರಾ ರೋಗಾಃ ಕುಲ ಗೋತ್ರಾಶ್ರಮಾದಯಃ ।**
**ಸ್ಥೂಲಸ್ಯೈವನತೇಮಿಾಷಾಂ ಸಾಕ್ಷಿಣೋ ನೈವಕಶ್ಚನ ॥**
**ಅಜ್ಞಾನ ಜಡತಾಲಸ್ಯ ಮೋಹ ನಿದ್ರಾ ಭ್ರಮಾ ದಯಃ ।**
**ಕಾರಣಸ್ಯೈವತೇಮಿಾಷಾಂ ಸಾಕ್ಷಿಣೋ ನೈವಕಶ್ಚನ ॥**
**ಕರ್ತೃತಾ ಭೋಕ್ತೃತಾ ಚಾಪಿ ಮಮತಾದಿಕ ಲಕ್ಷಣಃ ।**
**ಬುದ್ಧೇರೇವೈಷ ಸಂಸಾರೋ ನತೇ ಸಂಸೃತಿ ಸಾಕ್ಷಿಣಃ ॥**
**ಸ್ಥೂಲಾದಿ ದೇಹಸಂಬಂಧೋ ಜನ್ಮ ಮೃತ್ಯುಶ್ಚ ಸಂಸೃತಿಃ ।**
**ಸ್ವಾಜ್ಞಾನೇನತ್ವಯಾಸ್ವಸ್ಮಿನ್ ಸರ್ವಮೇತತ್ಪ್ರಕಲ್ಪಿತಂ ॥**

(ಜನನ ಮರಣ ರೋಗ ಕುಲ ಗೋತ್ರ ಆಶ್ರಮ) ಮೊದಲಾದವುಗಳೆಲ್ಲ ಸ್ಥೂಲದೇಹಕ್ಕೇ ವಿನಹ ಇದಕ್ಕೆ ಸಾಕ್ಷಿಯಾಗಿರುವ ಆತ್ಮನಿಗಲ್ಲ. (ಅಜ್ಞಾನ ಜಡತ್ವ ಆಲಸ್ಯ ಮೋಹ ನಿದ್ರೆ ಭ್ರಮೆ) ಇತ್ಯಾದಿಗಳೆಲ್ಲ ಕಾರಣ ದೇಹಕ್ಕೇ ವಿನಹ ಇದಕ್ಕೆ ಸಾಕ್ಷಿಯಾದ ನಿನಗೆ ಇಲ್ಲ. ಕರ್ತೃತ್ವ ಭೋಕ್ತೃತ್ವ ಮಮತಾದಿ ಸಂಸಾರ ವೆಲ್ಲ ಬುದ್ಧಿಗೇನೇ ವಿನಹ ನಿನಗಲ್ಲ.) ಸ್ಥೂಲಾದಿ ದೇಹಸಂಬಂಧವು ನಿನ್ನ ಅಜ್ಞಾನದಿಂದ ನಿನ್ನಲ್ಲಿ ಸರ್ವವೂ ಕಲ್ಪಿಸಲ್ಪಟ್ಟಿತು.

ಸುಜ್ಞಾನ ಸಾರವೆಂಬ ಗ್ರಂಥದಲ್ಲಿ—

**ಅಂಧತ್ವ ಮಂದತ್ವ ಪಟುತ್ವ ಧರ್ಮಾಸ್ಸೌಗುಣ್ಯ ವೈಗುಣ್ಯ ವಶಾದ್ವಿಚಕ್ಷುಷಃ ।**
**ಬಾಧಿರ್ಯ ಮೂಕತ್ವ ಮುಖಾಸ್ತಥೈವ ಶ್ರೋತ್ರಾದಿಧರ್ಮಾನತುವೇತ್ತುರಾತ್ಮನಃ ॥**

(ಕುರುಡತನ, ಮಂದತ್ವ, ಪಟುತ್ವ, ಸೌಗುಣ್ಯ, ವೈಗುಣ್ಯ, ಕಿವುಡು, ಮೂಗನಾಗುವುದು) ಇವೆಲ್ಲಾ ಶ್ರೋತ್ರ ಮೊದಲಾದ ಇಂದ್ರಿಯಗಳ ಧರ್ಮವೇ ಹೊರ್ತು ಇದನ್ನೆಲ್ಲಾ ತಿಳಿಯತಕ್ಕ ಆತ್ಮನಿಗೆ ಇಲ್ಲ.

**ಸ್ವಪ್ನೇರ್ಥ ಶೂನ್ಯೇ ಸೃಜತಿಸ್ವ ಶಕ್ತ್ಯಾ ಭೋಕ್ತ್ರಾದಿವಿಶ್ವಂ ಮನ ಏವ ಸರ್ವಂ ।**
**ತಥೈವ ಜಾಗ್ರತ್ಯಪಿನೋ ವಿಶೇಷಸ್ತತ್ಸರ್ವಮೇತನ್ಮನಸೋವಿಜೃಂಭಣಂ ॥**

ವಿಷಯಶೂನ್ಯವಾದ ಸ್ವಪ್ನದಲ್ಲಿ ಭೋಕ್ತೃತ್ವಾದಿ ಸಕಲ ಪ್ರಪಂಚವನ್ನು ಮನಸ್ಸು ಹೇಗೆ ಕಲ್ಪಿಸುತ್ತೋ ಅದರಂತೆ ಜಾಗ್ರತ್ಕಾಲದಲ್ಲಿಯೂ ಮನಸ್ಸು ಸಕಲ ಪ್ರಪಂಚವನ್ನು ಕಲ್ಪಿಸುತ್ತೆ. ಮತ್ತು,

**ಯೋವಾನಾತ್ಮ ಕೃತಂ ಕರ್ಮ ಪಶ್ಯತಾತ್ಮನ್ಯ ವಿಕ್ರಿಯೇ ।**
**ಸ ಏವಾಜ್ಞ ತಮೋಲೋಕೇ ನಗೋಪೋನಾಪಿ ಬಾಲಿಶಃ ॥**

ಯಾವನು ಅನಾತ್ಮಗಳಾದ ಕರಣೇಂದ್ರಿಯಾದಿಗಳಿಂದ ಮಾಡಲ್ಪಟ್ಟ ಕಾರ್ಯಗಳನ್ನು ತನ್ನಲ್ಲಿ ಆರೋಪಿಸಿಕೊಳ್ಳುತ್ತಾನೋ ಅವನೇ ಮೂಢನು. ದನ ಕಾಯುವವನೂ, ಬಾಲಕನೂ ಮೂಢರಲ್ಲ. ಈ ರೀತಿ ಹೇಳಿರೋಣದರಿಂದ ಜ್ಞಾನಿಯು ತಾನಲ್ಲದ ಕರಣೇಂದ್ರಿಯಾದಿಗಳಿಂದ ಮಾಡಲ್ಪಟ್ಟ ಕರ್ಮವನ್ನು ತನ್ನಲ್ಲಿ ಆರೋಪಿಸಿಕೊಳ್ಳದೆ ನಿರ್ಲೇಪನಾಗಿ ಮುಕ್ತನಾಗುತ್ತಾನೆ. ಅಜ್ಞಾನಿಯು ತನ್ನಲ್ಲಿ ಆರೋಪಿಸಿಕೊಂಡು ಬದ್ಧನಾಗುತ್ತಾನೆ. ಜ್ಞಾನಿಗೂ ಅಜ್ಞಾನಿಗೂ ಇಷ್ಟೇ ಭೇದವಲ್ಲದೆ, ಮಿಕ್ಕ ವ್ಯವಹಾರದಲ್ಲಿ ಇಬ್ಬರೂ ಸಮರೇನೆ. ಆದ್ದರಿಂದ ಪ್ರಾರಬ್ಧಕರ್ಮಾನುಗುಣ್ಯವಾಗಿ ವರ್ತಿಸುವ ಜ್ಞಾನಿಯನ್ನು ಶಾಸ್ತ್ರ ಪರಿಜ್ಞಾನವಿಲ್ಲದ ಮೂಢರು ನಿಂದಿಸಬೇಕೇ ವಿನಹ ತಿಳಿದವರು ಎಂದಿಗೂ ದೂಷಿಸರು. ಇದಲ್ಲದೆ ಜ್ಞಾನಿಗೆ ಸಂಚಿತಾಗಾಮಿಗಳೆರಡೂ ನಾಶವಾಗುವದೆಂದು ಹಿಂದೆ ಹೇಳಲ್ಪಟ್ಟಿದೆಯಷ್ಟೆ? ಈ ಕರ್ಮಗಳು ಹೇಗೆ ನಾಶವಾಗುತ್ತೆಂದರೆ, ಜ್ಞಾನಿಯು ಸಂಚಿತಾಗಾಮಿಗಳಲ್ಲಿ ಪುಣ್ಯಕರ್ಮವೂ ಉಂಟು. ಪಾಪಕರ್ಮಗಳೂ ಉಂಟು. ಇವೆರಡರಲ್ಲಿ (ದ್ವಿಷಂತಃ ಪಾಪಕೃತ್ಯಾಂ ಸುಹೃಸ್ಸಾಧುಕೃತ್ಯಾಂ) ಎಂದು ಶ್ರುತಿಯಲ್ಲಿ ಹೇಳಿದೆ. ಅಂದರೆ—ಜ್ಞಾನಿಯನ್ನು ಸ್ತುತಿಸುವರು. ಜ್ಞಾನಿಯ ಪುಣ್ಯಕರ್ಮವನ್ನು ದೂಷಿಸುವರು ಪಾಪಕರ್ಮವನ್ನು ಹೊಂದುತ್ತಾರೆಂದು ಶ್ರುತಿಯಲ್ಲಿರೋಣದರಿಂದ ಎಂದಿಗೂ ಜ್ಞಾನಿಗಳನ್ನು ದೂಷಿಸಕೂಡದು.

ಶಿಷ್ಯ—ಸ್ವಾಮಿ ಜ್ಞಾನಮಾರ್ಗವು ಅನಾಯಾಸದಿಂದ ಮುಕ್ತಿಯನ್ನು ಕೊಡತಕ್ಕದ್ದಾಗಿದೆ. ಇಂತಹುದರಲ್ಲಿ ಈ ಜ್ಞಾನದಲ್ಲಿ ಮನಃಪ್ರವೃತ್ತಿಯುಂಟಾಗುವದಿಲ್ಲವಲ್ಲಾ, ಅದು ಏತಕ್ಕೆ ?

ಗುರು—ಜನ್ಮಾಂತರದಲ್ಲಿ ಪುಣ್ಯ ಸಂಸ್ಕಾರವು ಬಲವಾಗಿರುವ ಪುರುಷನಿಗೆ ಜ್ಞಾನಮಾರ್ಗದಲ್ಲಿ ನಂಬಿಕೆ ತೋರಿ ವಿಶ್ವಾಸವುಂಟಾಗುತ್ತೆ. ಸಂಸ್ಕಾರಶೂನ್ಯನಿಗೆ ಕೋಟಿ ಪ್ರಮಾಣಗಳನ್ನು ಹೇಳಿದರೂ ನಂಬಿಕೆ ತೋರದೆ ಕರ್ಮದಲ್ಲೇ ಆಸಕ್ತನಾಗಿರುತ್ತಾನೆ. ಇದಕ್ಕೆ ಅವನ ದುಷ್ಕರ್ಮವೇ ಕಾರಣವಾದದ್ದು.

ವಿವೇಕಚೂಡಾಮಣಿಯಲ್ಲಿ—

**ಪ್ರಜ್ಞಾವಾನಪಿ ಪಂಡಿತೋಪಿ ಚತುರೋ ಪ್ರತ್ಯಂತ-ಸೂಕ್ಷ್ಮಾತ್ಮಧೃಕ್ ।**
**ನಾಲೀಢಸ್ತಮಸಾನವೇತ್ತಿ ಬಹುದಾ ಸಂಬೋಧಿತೋಪಿ ಸ್ಫುಟಂ ॥**

**ಭ್ರಾಂತ್ಯಾರೋಪಿ ತಮೋವ ಸಾಧು ಕಲಯತ್ಯಾ ಲಭ್ಯತೇ ತದ್ಗುರ್ಣಾ ।**
**ಹಂತಾಸೌ ಪ್ರಬಲಾ ದುರಂತ ತಮಶ್ಶಕ್ತಿರ್ಮಹತ್ಯಾವೃತಿಃ ॥**

ಪ್ರಜ್ಞಾವಂತನಾದರೂ, ಪಂಡಿತನಾದರೂ, ಚತುರನಾದರೂ, ಅತಿ ಸೂಕ್ಷ್ಮ ಬುದ್ಧಿಯುಳ್ಳವನಾದರೂ ಜನ್ಮಾಂತರ ಪಾಪಶೇಷದಿಂದ ಆವೃತನಾಗಿ ಅನೇಕ ಪ್ರಮಾಣಗಳಿಂದ ಎಷ್ಟು ವಿಧವಾಗಿ ಬೋಧಿಸಲ್ಪಟ್ಟವನಾದಾಗ್ಯೂ ತನ್ನ ಸ್ವರೂಪ ವನ್ನು ತಿಳಿಯುವ ವಿಷಯದಲ್ಲಿ ಮನಸ್ಸುಂಟಾಗದೆ ಭ್ರಾಂತಿಯಿಂದ ಕಲ್ಪಿಸಲ್ಪಟ್ಟ ಕರ್ಮವನ್ನೇ ಶ್ರೇಷ್ಠವಾಗಿ ತಿಳಿಯುತ್ತಾನೆ. ಆವರಣ ಶಕ್ತಿಯ ಮಹಿಮೆಯು ಆಶ್ಚರ್ಯವಾದದ್ದು. ಮಹಾವಾಕ್ಯದರ್ಪಣದಲ್ಲಿ—

**ಅದ್ಯಾಷ್ಟಮಿಾತಿ ನವಮಿಾತಿ ಚತುರ್ದಶೀತಿ ಜೋತಿಷ್ಕ ವಾಚೋ**
**ಪವಸಂತಿ ಭಕ್ತ್ಯಾ । ಶೃತೇರಹೋತತ್ವಮಸೀತಿ ವಾಕ್ಯಂ ನವಿಶ್ವ**
**ಸಂತ್ಯದ್ಭುತಮೋ ತದೇವ ॥**

ಈವತ್ತು ಅಷ್ಟಮಿ, ಈವತ್ತು ದಶಮಿ, ಏಕಾದಶಿ ಎಂಬುದಾಗಿ ಹೇಳುವ ಜ್ಯೋತಿಷ್ಕನ ವಚನದಲ್ಲಿ ನಂಬಿಕೆ ತೋರಿ ಭಕ್ತಿಯಿಂದ ಉಪವಾಸದಲ್ಲಿ ನರಳುತ್ತಾರೆ. ತತ್ತ್ವಮಸಿಯೆಂಬ ಶ್ರುತಿವಚನದಲ್ಲಿ ನಂಬಿಕೆ ತೋರುವುದಿಲ್ಲವಲ್ಲ ಇದು ಆಶ್ಚರ್ಯವಲ್ಲವೇ ?

**ಸಂದರ್ಶ್ಯಾರ್ಥ ಶಿಲಾಂ ಶಿಲಾಮಯಗೃಹೇ ಸಾಕ್ಷಾದಯಂ ಶ್ರೀಪತಿ**
**ರ್ಭಕ್ತೇಭ್ಯೋ ವಿವಿಧಾರ್ನ್ ಪ್ರಯಚ್ಛತಿ ವರಾರ್ನ್ ಸಂಸೇವ್ಯಮಾನಸ್ತ್ವಿತಿ।**
**ಉಕ್ತಾಂ ದೇವಲಕಸ್ಯವಾಚಮಧಿಕಂ ವಿಶ್ವಸ್ಯ ಸಂಸೇವತೇ ವಾಚಂ**
**ತತ್ವಮಸೀತಿ ವೇದಗದಿತಂ ನೋವಿಶ್ವಸತ್ಯದ್ಭುತಂ ॥**

ಕಲ್ಲಿನ ಮನೆಯಲ್ಲಿ ಒಂದು ಕಲ್ಲನ್ನು ತೋರಿಸಿ ಇವನು ಸಾಕ್ಷಾತ್ ಶ್ರೀಪ ತಿಯು ; ಭಕ್ತರಿಗೆ ನಾನಾವಿಧವಾದ ಇಷ್ಟಾರ್ಥಗಳನ್ನು ಕೊಡುತ್ತಾನೆ. ಆದ್ದರಿಂದ ನೀವು ಸೇವೆಮಾಡಿ ಎಂಬುದಾಗಿ ಹೇಳುವ ಪೂಜಾರಿ ಮಾತನ್ನು ನಂಬಿ ನಾನಾವಿಧ ವಾಗಿ ದೇಹವನ್ನು ದಂಡಿಸಿ ಸೇವೇ ಮಾಡುತ್ತಾರೆ. ತತ್ತ್ವಮಸಿ ಎಂಬ ವೇದ ವಾಕ್ಯವನ್ನು ಮಾತ್ರ ನಂಬುವುದಿಲ್ಲ.

**ಆತ್ಮನ್ಯನಾತ್ಮತಾಂ ಕೃತ್ವಾಪ್ಯ ನಾತ್ಮನ್ಯಾತ್ಮತಾಂ ಪುನಃ ॥**
**ಮೃಗ್ಯತೇಪುಸ್ತುಕೇಷ್ವಾತ್ಮಾ ಅಹೋ ಅಜ್ಞ ಜನಾಜ್ಞತಾ ॥**
**ಹಿತ್ವಾತ್ಮಾನಂ ಸದಾನಂದ ಮಾತ್ಮನಸ್ಸುಖಕಾಮ್ಯಯಾ ।**
**ಯಜಂತಿ ದೇವಾರ್ನ್ ಯಜ್ಞಾದ್ಯೈರಹೋ ಅಜ್ಞ ಜನಾಜ್ಞತಾ ॥**

ಸ್ವನೇವಾಕೃತ್ರಿಮಂ ದೇವ ಮಜ್ಞಾತ್ವಾಪ್ರತಿಮಾಂಜಡಾಃ ।
ಭಜಂತಿದೇವತಾಬುಧ್ಯಾ ಅಹೋ ಅಜ್ಞಜನಾಜ್ಞತಾ ॥
ಅಜ್ಞಾತ್ವಾಮುಕ್ತಮಾತ್ಮಾನ ಮಾತ್ಮನೋ ಮುಕ್ತಿಸಿದ್ಧಯೇ ।
ಪುಣ್ಯಕ್ಷೇತ್ರೇಷು ನಿವಸಂ ತ್ಯಹೋ ಅಜ್ಞಜನಾಜ್ಞತಾ ॥
ಮಲಮಾಂಸಮಯಂ ದೇಹಂ ಸ್ವಂಮತ್ವಾ ಶುಚಿಮಸ್ಯತು ।
ಶುದ್ಧಿಂ ಕುರ್ವಂ ತಿತೋಯಾದ್ಯೈ ರಹೋ ಅಜ್ಞಜನಾಜ್ಞತಾ ॥

ಆತ್ಮಸ್ವರೂಪನಾದ ತನ್ನಲ್ಲಿ ಅನಾತ್ಮತ್ವವನ್ನು, ಅನಾತ್ಮಗಳಾದ ದೇಹಾದಿಗಳಲ್ಲಿ ಆತ್ಮತ್ವವನ್ನೂ ಮಾಡಿ ಪುಸ್ತಕದಲ್ಲಿ ಆತ್ಮನನ್ನು ಹುಡುಕುತ್ತಾರೆ. ಮೂಢರ ಅಜ್ಞಾನವು ಆಶ್ಚರ್ಯವಾದದ್ದು. (ತಾನು ಸದಾನಂದ ಸ್ವರೂಪನೆಂಬುವುದನ್ನು ಮರೆತು ತನ್ನ ಸುಖಕ್ಕೋಸ್ಕರ ಯಜ್ಞಗಳಿಂದ ದೇವತೆಗಳನ್ನು ಭಜಿಸುತ್ತಾರೆ.) ಒಬ್ಬನಿಂದ ಮಾಡಲ್ಪಡದ ದೇವರಾದ ತನ್ನನ್ನು ತಿಳಿಯದೇ ಪ್ರತಿಮೆಗಳನ್ನು ದೇವತಾಭ್ರಾಂತಿಯಿಂದ ಭಜಿಸುತ್ತಾರೆ. ನಿತ್ಯ ಮುಕ್ತನಾದ ತನ್ನನ್ನು ಮರೆತು ಬೇರೆ ಮುಕ್ತಿಯಾಗಬೇಕೆಂದು ಪುಣ್ಯಕ್ಷೇತ್ರದಲ್ಲಿ ವಾಸಮಾಡುತ್ತಾರೆ. ಮಲಮಾಂಸಮಯವಾದ ದೇಹವೇ ನಾನೆಂದು ತಿಳಿದು ತನ್ನಲ್ಲಿ ಅಶುಚಿತ್ವವನ್ನು ಕಲ್ಪಿಸಿಕೊಂಡು ನೀರಿನಿಂದ ಶುದ್ಧಿಯನ್ನು ಮಾಡಿಕೊಳ್ಳುತ್ತಾರೆ. ಎಲೈ ಶಿಷ್ಯನೇ! ಇದೆಲ್ಲಾ ಅಜ್ಞಾನ ಕಾರ್ಯಗಳು. ಇದಲ್ಲದೆ ಜ್ಞಾನಿಯಾದಾಗ್ಯೂ ವಾಸನಾಕ್ಷಯವಾದ ಹೊರ್ತು ಮುಕ್ತನಾಗುವುದಿಲ್ಲ. (ದೇಹವಾಸನಾ, ಶಾಸ್ತ್ರವಾಸನಾ, ಲೋಕವಾಸನಾ) ಎಂದು ವಾಸನೆಯು ಮೂರು ವಿಧವು ; ದೇಹಕ್ಕೆ ಹೇಳಿದ ವರ್ಣಾಶ್ರಮಾವಸ್ಥೆಗಳನ್ನು ತನ್ನಲ್ಲಿ ಆರೋಪಿಸಿಕೊಳ್ಳುವುದೇ ದೇಹವಾಸನೆಯು ; ನಾನು ಪಂಡಿತನೆಂದು ಗರ್ವಿಸುವುದೇ ಶಾಸ್ತ್ರವಾಸನೆಯು; ಸತ್ಯತ್ವಭ್ರಾಂತಿಯಿಂದ ಲೋಕದಲ್ಲಿ ಅಭಿಮಾನಿಸಿರುವುದೇ ಲೋಕವಾಸನೆ. ಲೇಶಮಾತ್ರ ವಾಸನೆಯಿದ್ದಲ್ಲಿ ಮುಕ್ತಿ ಘಟಿಸದು. ಇದಕ್ಕೆ ಪ್ರಮಾಣ :

ಮಹಾವಾಕ್ಯದರ್ಪಣದಲ್ಲಿ—

ಸಂಸಾರ ಕಾರಣಂ ವಿದ್ಧಿ ವಾಸನೈವಾತ್ರ ದೇಹಿನಾಂ ।
ಶಕ್ತಿಸ್ಸಾಪ್ರಕೃತಿಸ್ಸೈವಾ ವಿದ್ಯಾವಿಕ್ಷೇಪನಾಮಿಕಾ ॥

ಪ್ರಾಣಿಗಳಿಗೆ ಸಂಸಾರಕ್ಕೆ ಕಾರಣವಾದದ್ದು ವಾಸನಾತ್ರಯವೇನೆ. ಶಕ್ತಿ, ಪ್ರಕೃತಿ, ಅವಿದ್ಯಾ, ನಿಕ್ಷೇಪ ಇವೆಲ್ಲಾ ವಾಸನೆಯೇನೆ. ಈರೀತಿ ಪ್ರಮಾಣ ವಿರೋಣದರಿಂದ ವಾಸನಾಕ್ಷಯವಾಗಬೇಕು.

ಶಿಷ್ಯ—ಸ್ವಾಮಿ ! ಶಾಸ್ತ್ರದಿಂದ ಪ್ರಯೋಜನವೇನು ? ಅನುಭವವಿರಬೇಕೆಂದು ಕೆಲ ವೇದಾಂತಿಗಳು ಹೇಳುತ್ತಾರೆ. ಈ ವಿಷಯವೆಂತು ?

ಗುರು—ಅನುಭವ ಉಂಟಾಗುವುದಕ್ಕೆ ವಿಚಾರ ಬೇಕು. ವಿಚಾರವೆಂದರೆ ಬ್ರಹ್ಮವಿಚಾರವು. ಬ್ರಹ್ಮನನ್ನು ವಿಚಾರಿಸುವಲ್ಲಿ ಬ್ರಹ್ಮವು ಹೇಗಿದೆ ಎಂಬ ಶಂಕೆಯುಂಟಾಗುತ್ತದೆ. ಬ್ರಹ್ಮನು ಸಚ್ಚಿದಾನಂದ ಸ್ವರೂಪನು. ಸಚ್ಚಿದಾನಂದಗಳೆಂದರೇನು ? ಸತ್ ಎಂದರೆ ಭೂತಭವಿಷ್ಯದ್ವರ್ತಮಾನ ಕಾಲತ್ರಯದಲ್ಲೂ ಕೆಡದೆ ಇರತಕ್ಕುದು. ಚಿತ್ ಅಂದರೇನು ಎಂಬ ಶಂಕೆಯುಂಟಾಗುತ್ತೆ. ಈ ರೀತಿ ವಿಚಾರಿಸುವಲ್ಲಿ ಶಾಸ್ತ್ರವಿಲ್ಲದೆ ಎಂದಿಗೂ ಗೊತ್ತಾಗಲಾರದು. ಅಥವಾ ಶಾಸ್ತ್ರವಿಲ್ಲದಿದ್ದಾಗ್ಯೂ ಸದ್ಗುರುವಿನಿಂದ ಬಹುಕಾಲ ಬೋಧಿಸಲ್ಪಟ್ಟವನಾಗಿ ಅನುಭವವನ್ನು ಪಡೆಯಬಹುದು ; ಶಾಸ್ತ್ರ ಓದಿದವನು ಗುರುವಿನಿಂದ ಸುಲಭವಾಗಿ ತಿಳಿದುಕೊಳ್ಳಬಹುದು. ಶಾಸ್ತ್ರವಿಲ್ಲದವನು ಬಹು ಶ್ರಮಪಡಬೇಕು. ಶಾಸ್ತ್ರವಿಲ್ಲದೆ ಅನುಭವ ಮಾತ್ರ ಉಳ್ಳವನು ತಾನು ಮುಕ್ತನಾಗಬಹುದೇ ವಿನಹ ಶಿಷ್ಯರನ್ನು ಮುಕ್ತರನ್ನಾಗಿ ಮಾಡವುದಕ್ಕೆ ಆಗುವುದಿಲ್ಲ. ಏಕೆಂದರೆ ಶಿಷ್ಯರಿಗುಂಟಾಗುವ ಸಂಶಯಗಳನ್ನು ಕಳೆಯುವುದಕ್ಕೆ ಯುಕ್ತಿಗಳು ತೋರುವುದಿಲ್ಲವಾಗಿ ಶಾಸ್ತ್ರಹೀನನಿಗೆ ಎಂದಿಗೂ ಶಕ್ತಿ ಸಾಲದು. ಅನುಭವವಿಲ್ಲದೆ ಬರೀ ಶಾಸ್ತ್ರವುಳ್ಳವನು ಎಂದಿಗೂ ಮುಕ್ತನಾಗುವುದಿಲ್ಲ. ಅವನ ಶಾಸ್ತ್ರವೆಂದಿಗೂ ಕೆಲಸಕ್ಕೆ ಬರುವುದಿಲ್ಲ. ಈ ವಿಷಯದಲ್ಲಿ : ವಿವೇಕಚೂಡಾಮಣಿಯಲ್ಲಿ—

**ವಾಗ್ವೈಖರೀ ಶಬ್ದಝರೀ ಶಾಸ್ತ್ರ ವ್ಯಾಖ್ಯಾನ ಕೌಶಲಂ ।**
**ವೈದುಷ್ಯಂ ವಿದುಷಾಂ ತದ್ವದ್ಭುಕ್ತಯೇನತು ಮುಕ್ತಯೇ ॥**

ವಾಕ್ಕಿನ ಚಮತ್ಕಾರ, ಶಬ್ದೋಚ್ಚಾರಣೆ, ನಾನಾ ಶಾಸ್ತ್ರ ಪಾಂಡಿತ್ಯ, ವ್ಯಾಖಾನ ಮಾಡತಕ್ಕ ಶಕ್ತಿ, ಕವಿತ್ವ, ಸಾಮರ್ಥ್ಯ ಇವೆಲ್ಲಾ ಭುಕ್ತಿಗೆ ಹೊರ್ತು ಮುಕ್ತಿಗೆ ಅಲ್ಲ.

**ನ ಗಚ್ಛತಿ ವಿನಾ ಪಾನಂ ವ್ಯಾಧಿರೌಷಧ ಶಬ್ದತಃ ।**
**ವಿನಾ ಪರೋಕ್ಷಾನುಭವಂ ಬ್ರಹ್ಮಶಬ್ದೈರ್ನಮುಚ್ಯತೇ ॥**

ಔಷಧಿಯನ್ನು ತಿನ್ನದೇನೆ ಮದ್ದೆಂದು ಬಾಯಲ್ಲಿ ಉಚ್ಚಾರಣೆ ಮಾಡಿದ ಮಾತ್ರದಿಂದ ಎಂದಿಗೂ ರೋಗ ನಾಶವಾಗಲಾರದು. ಇದರಂತೆ ಅಪರೋಕ್ಷಾನುಭವವಿಲ್ಲದೆ ಎಂದಿಗೂ ಮುಕ್ತನಾಗಲಾರನು.

**ಅಕೃತ್ವಾ ಶತ್ರುಸಂಹಾರ ಮಗತ್ವಾಖಿಲ ಭೂಶ್ರಿಯಂ ।**
**ರಾಜಾಹಮಿತಿ ಶಬ್ದೇನ ರಾಜಾ ಭವಿತುಮರ್ಹತಿ ॥**
**ಅಕೃತ್ವಾದೃಶ್ಯವಿಲಯಮಜ್ಞಾತ್ವಾ ತತ್ವಮಾತ್ಮನಃ ।**
**ಬಾಹ್ಯಶಬ್ದೈಃ ಕುತೋ ಮುಕ್ತಿ ರ್ಭುಕ್ತಿಮಾತ್ರ ಫಲಪ್ರದೈಃ ॥**

ಶತ್ರುಗಳನ್ನು ಸಂಹರಿಸದೇ ಸಕಲ ಭೂಮಂಡಲ ಸಂಪತ್ತನ್ನು ಹೊಂದದೆ ನಾನು ರಾಜನೆಂದರೆ ರಾಜನಾದಾನೆ ? ಇದರಂತೆ ದೃಶ್ಯವನ್ನು ಲಯಪಡಿಸದೆ ಆತ್ಮಾನುಭವವಿಲ್ಲದೆ ಬರೀ ಬಾಹ್ಯಶಾಸ್ತ್ರದಿಂದ ಮುಕ್ತನಾದಾನೆ ? ಅದು ಭುಕ್ತಿಗೇ ಸರಿ. ಈರೀತಿ ಅನುಭವವಿಲ್ಲದವನಿಗೆ ಎಂದಿಗೂ ಮುಕ್ತಿಯಿಲ್ಲ.

ಶಿಷ್ಯ—ಅನುಭವವುಳ್ಳವನು, ಅನುಭವವಿಲ್ಲದವನೆಂಬ ವಿಷಯವು ಹೇಗೆ ತಿಳಿಯಬೇಕು ?

ಗುರು—ಅನುಭವವುಳ್ಳವನು ಜನಗೋಷ್ಠಿಯನ್ನು ಕಟ್ಟಿಕೊಳ್ಳುವುದಿಲ್ಲ. ಲೋಕದಲ್ಲಿ ಪ್ರಸಿದ್ಧನಾಗಬೇಕೆಂಬ ಅಪೇಕ್ಷೆಯು ಅವನಿಗೆ ಎಂದಿಗೂ ಇರುವುದಿಲ್ಲ. ಬಾಹ್ಯವ್ಯಾಪಾರವನ್ನು ಬಿಟ್ಟು ಆತ್ಮಾನಂದದಲ್ಲೇ ಇರುತ್ತಾನೆ. ಸುತರಾಂ ಧನಾರ್ಜನೆಯಲ್ಲೂ ದೇಹಪೋಷಣೆಯಲ್ಲೂ ಅವನಿಗೆ ಅಭಿಮಾನವಿರದು. ಪ್ರಾರಬ್ಧ ಕರ್ಮದಿಂದ ಲಬ್ಧವಾಗುವುದರಲ್ಲಿ ತೃಪ್ತನಾಗಿ ಸರ್ವದಾ ಸಂತೋಷದಿಂದಿರುತ್ತಾನೆ. ಬ್ರಹ್ಮಾನುಭವವುಳ್ಳ ಪುರುಷನು ಪಾರಬ್ಧವಶದಿಂದ ಎಂತಹ ಪಾಪ ಕರ್ಮವನ್ನು ಮಾಡಿದರೂ ಬದ್ಧನಾಗುವುದಿಲ್ಲ. ಈ ವಿಷಯದಲ್ಲಿ ಭಗವದ್ಗೀತೆಯಲ್ಲಿ ಹೇಳಿರುವುದು—

**ಯಸ್ಯ ನಾಹಂಕೃತೋ ಭಾವೋ ಬದ್ಧಿರ್ಯಸ್ಯನಲಿಪ್ಯತೇ ।**
**ಹತ್ವಾಪಿ ಸ ಇಮಾ್ಞ ಲೋಕಾ್ಞ ನ ಹಂತಿ ನ ನಿಬಧ್ಯತೇ ॥**

ಯಾವನಿಗೆ ಕರಣೇಂದ್ರಿಯಾದಿಗಳು ಮಾಡುವ ಕರ್ಮದಲ್ಲಿ ನಾನು ಮಾಡಿದೆನೆಂಬ ಭಾವವಿಲ್ಲವೋ, ಯಾವನ ಬುದ್ಧಿಯು ಆ ಕರ್ಮದಲ್ಲಿ ಲೇಪಿಸುವುದಿಲ್ಲವೋ ಅಂತಹ ದೇಹಾಭಿಮಾನ ಶೂನ್ಯನಾದವನು ಈ ಲೋಕವನ್ನೇ ಸಂಹರಿಸಿದರೂ ಅವನು ಕೊಂದವನೂ ಅಲ್ಲ ; ಆ ಪಾಪದಿಂದ ಅವನು ಬದ್ಧವಾಗುವುದೂ ಇಲ್ಲ. ಈ ರೀತಿ ಹೇಳಿರುವುದರಿಂದ ಅನುಭವವುಳ್ಳ ಪುರುಷನಿಗೆ ಎಂದಿಗೂ ಚ್ಯುತಿಯಿಲ್ಲ. ಇಲ್ಲಿಂದ ಮುಂದೆ ವಿದ್ಯಾರಣ್ಯಮುನೀಂದ್ರ ವಿರಚಿತ ಪಂಚದಶೀಯೆಂಬ ಗ್ರಂಥದಲ್ಲಿನ ಸಾರಾಂಶವನ್ನು ಹೇಳುತ್ತೇನೆ.

**ಏತಸ್ಮಾತ್ಕಿ ಮಿಹೇಂದ್ರಜಾಲಮಪರಂ ಯದ್ಗರ್ಭವಾಸೇಸ್ಥಿತಂ ।**
**ರೇತಶ್ಚೇತತಿ ಹಸ್ತ ಮಸ್ತಕಪದ ಪ್ರೊದ್ಭೂತನಾನಾಂಕುರಂ ॥**

**ಪರ್ಯಾಯೇಣ ಶಿಶುತ್ವ ಯೌವನ ಜರಾವೇಷ್ಯೆರನೇಕೈರ್ವೃತಂ ।**
**ಪಶ್ಯತ್ಯತ್ತಿಶೃಣೋತಿ ಜಿಘ್ರತಿ ತಥಾ ಗಚ್ಛತ್ಯಥಾ ಗಚ್ಛತಿ ॥**

ಸ್ತ್ರೀಗರ್ಭದಲ್ಲಿ ಸೇರಿದ ಒಂದು ವೀರ್ಯಬಿಂದುವು ಕೈಕಾಲು ತಲೆ ಮುಖ ಇವುಗಳಿಂದ ಕೂಡಿ ಈಚೆಗೆ ಬಂದು, ಕ್ರಮವಾಗಿ ಬಾಲ್ಯ ಯೌವನ ಕೌಮಾರ ವಾರ್ಧಿಕ್ಯಾವಸ್ಥೆಗಳನ್ನು ಹೊಂದಿ ನೋಡುತ್ತದೆ, ಕೇಳುತ್ತದೆ, ಮಾತನಾಡುತ್ತದೆ, ತಿನ್ನುತ್ತದೆ, ಮೂಸುತ್ತದೆ. ಹೇಗೆ ಬಂತೋ ಹಾಗೆ ಹೋಗುವುದಲ್ಲಾ ! ಇದಕ್ಕಿಂತಲೂ ಬೇರೆ ಇಂದ್ರಜಾಲ ಉಂಟೆ ?

**ತೃಣಾಕಾದಿಯೋಗಾರ್ಚಂತಾ ಈಶ್ವರೇ ಭ್ರಾಂತಿಮಾಶ್ರಿತಾಃ । ಲೋಕಾಯತಾದಿ ಸಾಂಖ್ಯಾಂತಾ ಜೀವೇ ಭ್ರಾಂತಿಮಾಶ್ರಿತಾಃ ॥ ೧ ॥ ಅದ್ವಿತೀಯ ಬ್ರಹ್ಮತತ್ವಂ ನಜಾನಂತಿ ಯದಾತದಾ । ಭ್ರಾಂತಾಏವಾಖಿಲಾಸ್ತೇಷಾಂ ಕ್ವಮುಕ್ತಿಃ ಕ್ವೇಹವಾಸುಖಂ ॥ ೨ ॥ ಯೇವದಂತೀತ್ಥಮೇತೇಪಿ ಭ್ರಾಮ್ಯಂತೇವಿದ್ಯಯಾತ್ರಕಿಂ । ನಯಥಾಪೂರ್ವಮೇತೇಷಾ ಮತ್ರಭ್ರಾಂತಿರದರ್ಶನಾತ್ ॥ ೩ ॥ ಅಹಂಕಾರ ಚಿದಾನಾತ್ಮಾನಾವೇಕೀಕೃತ್ಯಾವಿವೇಕಿತಃ । ಇದಂಮೇಸ್ಯಾದಿದಂಮೇಸ್ಯಾದಿತೀಚ್ಛಾಃ ಕಾಮುಶಬ್ದಿತಾಃ ॥೪॥ ಅಪ್ರವೇಶ್ಯ ಚಿದಾತ್ಮಾನಂ ಪೃಥಕ್ಪತ್ಯನ್ನಹಂಕೃತಿಂ । ಇಚ್ಛಂತು ಕೋಟಿವಸ್ತೂನಿ ನಬಾಧೋಗ್ರಂಥಿಭೇದತಃ ॥೫॥ಗ್ರಂಥಿಬೇ**

---

ಗುರು—ತೃಣಾರ್ಚಕರು ಮೊದಲಾಗಿ ಯೋಗವಾದಿ ಪರ್ಯಂತ ಸಮಸ್ತರೂ ಈಶ್ವರ ವಿಷಯದಲ್ಲಿ ಭ್ರಾಂತರು. ಮತ್ತು ಲೋಕಾಯತರು ಮೊದಲುಗೊಂಡು ಸಾಂಖ್ಯವಾದಿ ಪರ್ಯಂತವಾದ ಸಕಲರೂ ಜೀವವಿಷಯದಲ್ಲಿ ಭ್ರಾಂತರಾಗಿದ್ದಾರೆ ॥ ೧ ॥ ಇವರು ಭ್ರಾಂತರು ಹೇಗೆಂದರೆ:—ಅದ್ವಿತೀಯ ತತ್ವವನ್ನು ತಿಳಿಯದ ಕಾರಣ ಇವರು ಭ್ರಾಂತರೇ ಸರಿ ; ಇವರಿಗೆ ಮುಕ್ತಿಯೂ ಇಲ್ಲ; ಇಹಲೋಕ ಸುಖವೂ ಇಲ್ಲ ॥ ೨ ॥ ಪ್ರಪಂಚದ ಮಿಥ್ಯಾತ್ವವನ್ನು ಅದ್ವೈತದ ಸತ್ಯತ್ವವನ್ನೂ ತಿಳಿದಮೇಲೆ ಸಂಸಾರದಲ್ಲಿದ್ದಾಗ್ಯೂ ಯಾವ ಬಾಧೆಯೂ ಇಲ್ಲ. ಅವನಿಗೆ ಪೂರ್ವದಂತೆ ಜಗತ್ಸತ್ಯತ್ವ ಭ್ರಾಂತಿಯಿರದು ॥೩॥ ಅಹಂಕಾರ ಚಿದಾತ್ಮರಿಬ್ಬರನ್ನು ಜೊತೆಗೂಡಿಸಿ ಇದು ನನಗೆ, ಇದು ನನಗೆಂದು ಅಪೇಕ್ಷಿಸುವುದೇ ಕಾಮವೆನಿಸುತ್ತದೆ ॥೪॥ ನಾನು, ನನ್ನದು ಎಂಬ ಬಯಕೆಯು ಅಹಂಕಾರದ್ದು. ಈ ಅಹಂಕಾರ ಧರ್ಮವನ್ನು ತನ್ನ ಮೇಲೆ ಹಾಕಿಕೊಳ್ಳದೆ ಅಹಂಕಾರಚಿದಾತ್ಮರನ್ನು ಬೇರ್ಪಡಿಸಿ ಕೋಟಿ ವಸ್ತುಗಳನ್ನು ಅಪೇಕ್ಷಿಸಿದಾಗ್ಯೂ, ಗ್ರಂಥಿಭೇದವಾಗಿರೋಣದರಿಂದ ಯಾವ ಬಾಧಕವೂ ಉಂಟಾಗಲಾರದು ॥ ೫ ॥ ಶಿಷ್ಯ:—ಗ್ರಂಥಿಭೇದವಾದ ಮೇಲೆ ವಿಷ

**ದೇಪಿ ಸಂಭಾವ್ಯಾ ಇಚ್ಛಾ ಪ್ರಾರಬ್ಧದೋಷತಃ । ಬುಧ್ವಾಪಿ ಪಾಪಬಾಹುಳ್ಯಾದ ಸಂತೋಷೋ ಯಥಾತವ ॥ ೬ ॥ ಪ್ರವೃತ್ತೌವಾ ನಿವೃತೌವಾ ದೇಹೇಂದ್ರಿಯ ಮನೋಧಿಯೋಂ । ನ ಕಿಂಚಿದಪಿ ವೈಷಮ್ಯ ಮಸ್ತ್ಯಜ್ಞಾ ವಿಬುದ್ಧಯೋಃ ॥೭॥ ಪ್ರಾತ್ಯಶ್ರೋತ್ರಿಯಯೋರ್ವೇದ ಪಾಠಾಪಾಠಕೃತಾಭಿದಾ । ನಾಹಾರಾದಾ ವಸ್ತಿ ಭೇದಸ್ಸೋಯಂನ್ಯಾಯೋತ್ರಯೋತ್ರಯೋಜ್ಯತಾಂ ॥ ೮ ॥ ನಹ್ಯಾಹಾರಾದಿ ಸಂತಜ್ಯ ಭರತಾದ್ಯಾಸ್ಥಿತಾಃ ಕ್ವಚಿತ್ । ಕಾಷ್ಠಪಾಷಾಣವತ್ಕಿಂತು ಸಂಗಭೀತಾ ಉದಾಸತೇ ॥ ೯ ॥ ಅಜ್ಞಾತ್ವಾ ಶಾಸ್ತ್ರಹೃದಯಂ ಮೂಢೋ ವಕ್ತ್ಯನ್ಯಥಾ ನ್ಯಥಾ । ಮೂರ್ಖಾಣಾಂನಿರ್ಣಯಸ್ತ್ವಾಸ್ತಾ ಮಸ್ಮತ್ಸಿದ್ಧಾಂತ ಉಚ್ಯತೇ ॥೧೦॥ ವೈರಾಗ್ಯಬೋಧೋ ಪರಮಾಸ್ಸಹಾಯಾಸ್ತೇ ಪರಸ್ಪರಂ । ಪ್ರಾಯೇಣಸಹವರ್ತಂತೇ ವಿಯುಜ್ಯಂತೇ ಕ್ವಚಿತ್ಕ್ವಚಿತ್ ॥೧೧॥ ಬ್ರಹ್ಮಲೋಕ ತೃಣೀಕಾರೋ**

ಯಾಭಿಲಾಷೆಯು ಹೇಗುಂಟಾಗುವುದು ? ಗುರು:—ಅದಕ್ಕೆ ಪ್ರಾರಬ್ಧಕರ್ಮವೇ ಕಾರಣವು. ಹೇಗೆಂದರೆ—ಇಷ್ಟು ವಿಧವಾಗಿ ಬೋಧಿಸಿದರೂ ಇನ್ನೂ ನಿನಗೆ ಭ್ರಾಂತಿ ನಾಶವಾಗದೇ ಇರುವುದೇ ಪ್ರಾರಬ್ಧಕ್ಕೆ ದೃಷ್ಟಾಂತರವು ॥೬॥ ಸಂಸಾರದ ಪ್ರವೃತ್ತಿಯಲ್ಲಾಗಲಿ ನಿವೃತ್ತಿಯಲ್ಲಾಗಲಿ ದೇಹೇಂದ್ರಿಯ ಮನೋಬುದ್ಧಿ ಇವುಗಳ ವಿಷಯದಲ್ಲಿ ಜ್ಞಾನಿಗೂ ಅಜ್ಞಾನಿಗೂ ತಿಲಮಾತ್ರ ಭೇದವಿಲ್ಲ ॥ ೭ ॥ ಸದ್ಬ್ರಾಹ್ಮಣ, ಶೂದ್ರ ಇವರಿಬ್ಬರಲ್ಲಿ ಬ್ರಾಹ್ಮಣನು ವೇದಾಧ್ಯಯನ ಮಾಡುತ್ತಾನೆ. ಶೂದ್ರನು ಮಾಡುವುದಿಲ್ಲ. ಇಷ್ಟೇ ಭೇದ ವಿನಹ ಮಿಕ್ಕ ನಿದ್ರಾಹಾರಾದಿಗಳಲ್ಲಿ ಇಬ್ಬರೂ ಸಮರೇ. ಇದರಂತೆ ಜ್ಞಾನಿ ಮತ್ತು ಅಜ್ಞಾನಿಗಳಲ್ಲಿ ಜ್ಞಾನಿಯು ಸಕಲ ವ್ಯವಹಾರವನ್ನು ಮಿಥ್ಯವೆಂದು ತಿಳಿದಿರುವನು. ಅಜ್ಞಾನಿಯು ಸತ್ಯವೆಂದು ತಿಳಿದಿರುತ್ತಾನೆ ; ಇದೇ ಭೇದ. ಮಿಕ್ಕಿದ್ದೆಲ್ಲಾ ಇಬ್ಬರಿಗೂ ಸಮನೇಯೆ ॥ ೮ ॥ ಭರತಾದಿ ಜ್ಞಾನಿಗಳು ನಿದ್ರಾಹಾರಾದಿ ವ್ಯವಹಾರವನ್ನು ಬಿಟ್ಟು ಕಾಷ್ಠ ಪಾಷಾಣದಂತೆ ಇರಲಿಲ್ಲ. ಅವರು ಸಂಗಭೀತರಾಗಿ ರಹಸ್ಯವನ್ನು ಸೇರುತ್ತಿದ್ದರು ॥ ೯ ॥ ಶಾಸ್ತ್ರಮರ್ಮವನ್ನು ತಿಳಿಯದ ಮೂಢರು ಜ್ಞಾನಿಗಳನ್ನು ನೋಡಿ (ಹೀಗಿರಬೇಕೆಂದು) ಬಾಯಿಗೆ ಬಂದಂತೆ ಮಾತನಾಡುತ್ತಾರೆ. ಈ ಮೂರ್ಖರ ನಿರ್ಣಯವು ಹಾಗಿರಲಿ, ನಮ್ಮ ಸಿದ್ಧಾಂತವನ್ನು ಕೇಳು ॥ ೧೦ ॥ ಮೋಕ್ಷಕ್ಕೆ ಜ್ಞಾನ, ವೈರಾಗ್ಯ, ಉಪರಿತಿ ಇವು ಮೂರೂ ಸಾಧನಗಳು. ಇವೆಲ್ಲಾ ಒಬ್ಬನಲ್ಲಿರುವವು. ಕೆಲವರಲ್ಲಿ ಕೆಲವು ಇರುವುದಿಲ್ಲ ॥ ೧೧ ॥ ಬ್ರಹ್ಮಲೋಕವನ್ನೇ ತೃಣೀಕಾರಮಾಡಿ ಅದರಲ್ಲೂ ಆಶೆಯನ್ನು ಬಿಟ್ಟಿರುವುದೇ ವೈರಾಗ್ಯಕ್ಕೆ ಕೊನೆಯು. ಪೂರ್ವದಲ್ಲಿ ಈ ಶರೀರವೇ ನಾನು ಎಂದು ಹೇಗೆ ದೃಢವಾಗಿ ತಿಳಿದಿದ್ದನೋ

**ವೈರಾಗ್ಯಸ್ಯಾವಧಿರ್ಮತಃ । ದೇಹಾತ್ಮವತ್ಪರಾತ್ಮತ್ವ ದಾರ್ಢ್ಯೇ ಬೋಧಸ್ಸಮಾಪ್ಯತೇ ॥ ೧೨ ॥ ಸುಪ್ತಿರ್ನಿಸ್ಮೃತಿಸ್ಸೀಮಾ ಭವೇದುಪರಮಸ್ಯಹಿ । ಧಿಯಾಸ್ವಯಾ ವಿನಿಶ್ಚೇಯಂ ತಾರತಮ್ಯಮವಾಂತರಂ ॥ ೧೩ ॥ ತ್ರಯೋಽಪ್ಯತ್ಯಂ ತಪಕ್ವಾಶ್ಚೇನ್ಮಹಸಸ್ತಪಸಃ ಫಲಂ । ದುರಿತೇನ ಕ್ವಚಿತ್ಕಿಂಚಿತ್ಕದಾಚಿತ್ಪ್ರತಿಬಧ್ಯತೇ ॥ ೧೪ ॥ ವೈರಾಗ್ಯೋಪರತೀಪೂರ್ಣೇ ಬೋಧಸ್ತು ಪ್ರತಿಬಧ್ಯತೇ । ಯಸ್ಯ ತಸ್ಯ ನ ಮೋಕ್ಷೋಽಸ್ತಿ ಪುಣ್ಯಲೋಕಸ್ತಪೋಬಲಾತ್ ॥ ೧೫ ॥ ಪೂರ್ಣೇಬೋಧೇತದನ್ಯೌದ್ವೌ ಪ್ರತಿಬದ್ಧೌ ಯದಾ ತದಾ । ಮೋಕ್ಷೋ ವಿನಿಶ್ಚಿತಃ ಕಿಂತು ದೃಷ್ಟ ದುಃಖಂ ನನಶ್ಯತಿ ॥ ೧೬ ॥ ಪ್ರಾರಬ್ಧಕರ್ಮನಾನಾತ್ವಾತ್ ಬುದ್ಧಾನಾಮನ್ಯಥಾನ್ಯಥಾ । ವರ್ತಂತೇ ತೇನ ಶಾಸ್ತ್ರಾರ್ಥೇ ಭ್ರಮಿತವ್ಯಂ ನ ಪಂಡಿತೈಃ ॥ ೧೭ ॥ ಸ್ವಸ್ವಕರ್ಮಾನುಸಾರೇಣ ವರ್ತಂತಾಂ ತೇ ಯಥಾಯಥಾ । ಅವಶಿಷ್ಟಸ್ಸರ್ವಬೋಧಸ್ಸಮಾಮುಕ್ತಿರಿತಿಸ್ಥಿತಿಃ ॥೧೮॥ ಮಿಥ್ಯಾತ್ವ ವಾಸನಾದಾರ್ಢ್ಯೇ ಪ್ರಾರಬ್ಧ ಕ್ಷಯ ಕಾಂಕ್ಷಯಾ। ಅಕ್ಲಿಶ್ಯಂತಃ ಪ್ರವರ್ತಂತೇ ಸ್ವಸ್ವಕರ್ಮಾನುಸಾರತಃ ॥೧೯॥**

---

ಅದರಂತೆ ಬ್ರಹ್ಮವೇ ನಾನು ಎಂಬ ದೃಢನಿಶ್ಚಯವೇ ಜ್ಞಾನಕ್ಕೆ ಕೊನೆಯು ॥೧೨॥ ಯಮನಿಯಮಾದ್ಯಷ್ಟಾಂಗಯೋಗದಿಂದ ಸುಷುಪ್ತಿಯಂತೆ ಬಾಹ್ಯಸ್ಮರಣೆಯು ಲೇಶಮಾತ್ರವೂ ಇಲ್ಲದೆ ಕೇವಲ ನಿರ್ವಿಕಲ್ಪಸಮಾಧಿಯಲ್ಲಿರುವುದೇ ಉಪರತಿಗೆ ಕೊನೆಯು. ಈ ರೀತಿಯಾದ ಬುದ್ಧಿಯಿಂದ ತಾರತಮ್ಯವನ್ನು ತಿಳಿಯಬೇಕು ॥೧೩॥ ಇವು ಮೂರೂ ಒಬ್ಬನಲ್ಲೇ ಕೂಡಿದ್ದರೆ ಮಹಾತಪಸ್ಸಿನ ಫಲ. ಪ್ರಾರಬ್ಧ ಕರ್ಮಶೇಷದಿಂದ ಕೆಲವು ಇರುವುದಿಲ್ಲ ॥ ೧೪ ॥ ವೈರಾಗ್ಯೋಪರತಿಗಳೆರಡೂ ಇದ್ದು ಜ್ಞಾನಮಾತ್ರವಿಲ್ಲದಿದ್ದರೆ ಅವನಿಗೆ ಮುಕ್ತಿಯಿಲ್ಲ. ವೈರಾಗ್ಯೋಪರತಿಗಳ ಬಲದಿಂದ ಪುಣ್ಯಲೋಕ ಪ್ರಾಪ್ತವಾಗುವುದು ॥ ೧೫ ॥ ಜ್ಞಾನ ಒಂದು ಸಂಪೂರ್ಣವಾಗಿದ್ದು ವೈರಾಗ್ಯೋಪರತಿಗಳಿಲ್ಲದಿದ್ದರೆ ಮೋಕ್ಷವೇನೋ ಸಿದ್ಧಿಸುವುದು. ಇಹ ಲೋಕದಲ್ಲಿ ದೇಹವಿರುವವರಿವಿಗೂ ಸಂಸಾರದುಃಖ ತಪ್ಪುವುದಿಲ್ಲ ॥ ೧೬ ॥ ಪ್ರಾರಬ್ಧಕರ್ಮ ನಾನಾತ್ವದಿಂದ ಜ್ಞಾನಿಗಳು ಕರ್ಮ ಶಾಸ್ತ್ರಾರ್ಥದಿಂದ ಭ್ರಾಂತಿಪಡಕೂಡದು ॥ ೧೭ ॥ ಅವರವರ ಕರ್ಮಾನುಗುಣ್ಯವಾಗಿ ಜ್ಞಾನಿಗಳ ಆಚರಣೆಯು ನಾನಾವಿಧವಾಗಿದ್ದಾಗ್ಯೂ ಅವರಲ್ಲಿರುವ ಸಾಧಾರಣವಾದ ಜ್ಞಾನ ಮಾತ್ರ ಒಂದೇ ವಿಧವಾಗಿರೋಣದರಿಂದ ಎಲ್ಲರಿಗೂ ಮುಕ್ತಿಯೊಂದೇ ॥ ೧೮ ॥ ಜಗನ್ಮಿಥ್ಯಾತ್ವ ವಾಸನೆಯು ದೃಢಪಡುವುದಕ್ಕೂ ಪ್ರಾರಬ್ಧ ನಾಶಕ್ಕಾಗಿಯೂ ದುಃಖವನ್ನು ಅಂಟಿಸಿಕೊಳ್ಳದೆ ಪ್ರಾರಬ್ಧ ಕರ್ಮಾನುಗುಣ್ಯವಾಗಿ ಜ್ಞಾನಿಗಳು ವ್ಯವಹರಿಸುತ್ತಾರೆ ॥ ೧೯ ॥ ಹಾಗಾದರೆ ಅನಾಚಾರದಲ್ಲಿ ಪ್ರವರ್ತಿಯುಂಟಾಗುತ್ತಲೂ ಅಂದರೆ ಹಾಗಾದರೂ

ಅತಿಪ್ರಸಂಗೋಮಾಶಂಕ್ಯಕಿ ಸ್ವಕರ್ಮವಶವರ್ತಿನಾಂ। ಅಸ್ತುವಾಕೇನ ಶಕ್ಯೇತ ಕರ್ಮನಾರಯಿತುಂ ವದ ॥ ೨೦ ॥ ಜ್ಞಾನಿನೋಜ್ಞಾನಿನಶ್ಚಾತ್ರ ಸಮೇ ಪ್ರಾರಬ್ಧ ಕರ್ಮಣಾ।ನಕ್ಲೇಶೋ ಜ್ಞಾನಿನೋ ಧೈರ್ಯಾನ್ಮೂಢಃ ಕ್ಲಿಶ್ಯತ್ಯಧೈರ್ಯತಃ। ಅವಶಂ ಭಾವಿ ಭಾವಾನಾಂ ಪ್ರತೀಕಾರೋಭವೇದ್ಯದಿ । ತದಾ ದುಃಖೈರ್ನಲಿಪ್ಯೇ ರನ್ನಳ ರಾಮ ಯುಧಿಷ್ಠಿರಾಃ ॥ ೨೨ ॥ ಸ್ವಭಾವಜೇನ ಕೌಂತೇಯ ನಿಬದ್ಧಸ್ವೇನ ಕರ್ಮಣಾ । ಕರ್ತುಂನೇಚ್ಛಸಿಯನ್ಮೋಹಾತ್ಕರಿಷ್ಯಸ್ಯ ವಶೋಪಿತತ್ ॥ ೨೩ ॥ ದಗ್ಧಬೀಜಮರೋಹೇಪಿ ವಿಕ್ಷಣಾಯೋಪಯುಜ್ಯತೇ । ವಿದ್ವದ್ವಿಜ್ಞಾಪ್ಯಲ್ಪ ಭೋಗಂ ಕುರ್ಯಾನ್ನವ್ಯಸನಂ ಬಹು ॥ ೨೪ ॥ ನಿರ್ವಿಕಲ್ಪ ಸಮಾಧೌತು ದ್ವೈತಾ ದರ್ಶನಹೇತತಃ । ಸೈವಾಪರೋಕ್ಷ ವಿದ್ಯೇತಿ ಚೇತ್ಸುಷುಪ್ತಿಸ್ತಥಾನಕಿಂ ॥ ೨೫ ॥ ಆತ್ಮತತ್ವಂ ನಜಾನಾತಿ ಸುಪ್ತೌ ಯದಿ ತದಾತ್ವಯಾ । ಆತ್ಮಧೀರೇವ ವಿದ್ಯೇತಿ

---

ಆಗಬಹುದು. ಪ್ರಾರಬ್ಧವನ್ನು ನಿವಾರಿಸುವುದಕ್ಕೆ ಯಾರಿಂದಾಗುವುದು ? ॥೨೦॥ ಪ್ರಾರಬ್ಧಕರ್ಮವು ಜ್ಞಾನಿ ಅಜ್ಞಾನಿಗಳಿಬ್ಬರಿಗೂ ಸಮನೇಯೆ. ಜ್ಞಾನಿಗೆ ಧೈರ್ಯ ವಿರೋಣದರಿಂದ ಕ್ಲೇಶವಿಲ್ಲ. ಅಜ್ಞಾನಿಗೆ ಧೈರ್ಯವಿಲ್ಲವಾಗಿ ಕ್ಲೇಶಪಡುವನು. ಇದೇ ಭೇದವು ॥ ೨೧ ॥ ಪ್ರಾರಬ್ಧಕ್ಕೆ ಪ್ರತೀಕಾರವಿದ್ದಮೇಲೆ (ನಳ, ರಾಮ, ಯುಧಿಷ್ಠಿರ) ಇವರು ದುಃಖಪಡುತ್ತಿರಲಿಲ್ಲ ॥ ೨೨ ॥ (ಈ ವಿಷಯವಾಗಿ ಭಗವದ್ಗೀತೆಯಲ್ಲಿ ಹೇಳಿರುವುದೇನೆಂದರೆ) ಎಲೈ ಅರ್ಜುನನೇ ? ನಿನ್ನ ಪ್ರಾರಬ್ಧ ಕರ್ಮದಿಂದ ಬದ್ಧನಾಗಿ ಯಾವುದನ್ನು ಮಾಡಬಾರದೆಂದು ತಿಳಿದಿದ್ದೆಯೋ ಅದನ್ನೇ ಮೋಹದಿಂದ ಮಾಡುತ್ತೀಯೆ ॥ ೨೩ ॥ ಶಿಷ್ಯ:—ಜ್ಞಾನಿಯಾದರೂ ಪ್ರಾರಬ್ಧ ಕರ್ಮವಶದಿಂದ ಮಾಡಬಾರದುದನ್ನಾದರೂ ಮಾಡಿದ್ದಲ್ಲಿ ಈ ಪ್ರಾರಬ್ಧವು ಮುಂಕ್ಕೆ ದುರ್ಗತಿಯನ್ನು ಕೊಡಲಾರದೆ? ಗುರು:-ಹುರಿದ ಬೀಜಗಳು ತಿನ್ನುವುದಕ್ಕೆ ಮಾತ್ರ ಉಪಯೋಗಿಸುವವೇ ವಿನಹ ಅದನ್ನು ಬಿತ್ತಿದರೆ ಗಿಡವಾಗಲಾರದು. ಇದರಂತೆ ಜ್ಞಾನಿಯ ಪ್ರಾರಬ್ಧವೂ ಅನುಭವಿಸುವುದಕ್ಕೆ ಯೋಗ್ಯವೇ ವಿನಹ ಮುಂವಕ್ಕೆ ಅದು ನಿರ್ಮೂಲವಾಗುವದು ॥ ೨೪ ॥ ಶಿಷ್ಯ:—ನಿರ್ವಿಕಲ್ಪ ಸಮಾಧಿಯಲ್ಲಿ ಸ್ವಲ್ಪವಾದರೂ ದ್ವೈತಭಾವನೆಯು ತೋರದೇ ಆನಂದವಿರೋಣದರಿಂದ ಆ ನಿರ್ವಿಕಲ್ಪ ಸಮಾಧಿಯೇ ಬ್ರಹ್ಮವಿದ್ಯೆ ಎಂದು ಹೇಳಬೇಕಲ್ಲ ? (ಆ ಪಕ್ಷಕ್ಕೆ) ಗುರು:—ಸುಷುಪ್ತಿಯಲ್ಲಿಯೂ ದ್ವೈತವಸ್ತು ತೋರದೇ ಆನಂದವೇ ಇರುತ್ತೆಯಾದ್ದರಿಂದ ಸುಷುಪ್ತಿಯನ್ನು ಬ್ರಹ್ಮವಿದ್ಯೆಯೆಂದು ಏತಕ್ಕೆ ಹೇಳಕೂಡದು ? ॥ ೨೫ ॥ ಶಿಷ್ಯ:—ಸುಷುಪ್ತಿಯಲ್ಲಿ ಆತ್ಮತತ್ವ ಜ್ಞಾನವಿಲ್ಲದಕಾರಣ ಅದು ಬ್ರಹ್ಮವಿದ್ಯೆಯಾಗಲಾರದು. ಗುರು:—ಹಾಗಾದರೆ ದ್ವೈತವಿಸ್ಮೃತಿಯು ಬ್ರಹ್ಮವಿದ್ಯೆಯಲ್ಲ.

**ವಾಚ್ಯಂ ನ ದ್ವೈತವಿಸ್ಮೃತಿಃ ॥೨೬॥ ಉಭಯಂ ಮಿಳಿತಂ ವಿದ್ಯಾ ಯದಿತರ್ಹಿ ಘಟಾದಯಃ । ಅರ್ಧವಿದ್ಯಾಭಾಜಿನಸ್ಸ್ಯುತ್ಸಕಲ ದ್ವೈತ ವಿಸ್ಮೃತೇಃ ॥ ವಾತ ಪಿತ್ತ ಶ್ಲೇಷ್ಮ ಜನ್ಯ ವ್ಯಾಧಯಃ ಕೋಟಿಶಸ್ತನೌ । ದುರ್ಗಂಧಿತ್ವ ಕುರೂಪತ್ವ ದಾಹ ಭಂಗಾದಯಸ್ತಥಾ ॥ ೨೮ ॥ ಕಾಮ ಕ್ರೋಧಾ ದಯಾ ಶ್ಯಾಂತಿ ದಾಂತ್ಯಾದ್ಯಾಲಿಂಗ ದೇಹಗಾಃ । ಸ್ವಪರಂ ಚ ನವೇತ್ಯಾತ್ಮಾ ವಿನಷ್ಟಇವಕಾರಣೇ ॥ ೨೯ ॥ ಏತೇಜ್ವರಾ ಶರೀರೇಷು ತ್ರಿಷುಸ್ವಾಭಾವಿಕಾಮತಾಃ । ವಿಯೋಗೇ ತುಚ್ಛದೈಸ್ತಾನಿ ಶರೀರಾಣ್ಯೇವನಾಸತೇ ॥ ೩೦ ॥ ಚಿದಾಭಾಸೇ ಸ್ವತಃ ಕೋಪಿ ಜ್ವರೋನಾಸ್ತಿ ಯತಶ್ಚಿತಃ । ಪ್ರಕಾಶೈಕ ಸ್ವಭಾವತ್ವ ಮೇವದೃಷ್ಟಂ ನ ಚೇತರತ್ ॥ ೩೧ ॥ ಪ್ರವೃತ್ತಾವಾಗ್ರಹೋನ್ಯಾಯೋ ಬೋಧಹೀನಸ್ಯ ಸರ್ವಥಾ । ಸ್ವರ್ಗಾಯ ಪಾಪವರ್ಗಾಯ ಯತಿತವ್ಯಂ ಯತೋನ್ಯಭಿಃ ॥ ೩೨ ॥ ವಿದ್ವಾಂಶ್ಚೇತ್ತಾ ದೃಶಾಂ ಮಧ್ಯೇ ತಿಷ್ಠೇತ್ತದನುರೋಧತಃ । ಕಾಯೇನ ಮನಸಾ ವಾಚ ಕರೋತ್ಯೇ ವಾಖಿಲಾಃ ಕ್ರಿಯಾಃ ॥೩೩॥ ಏವಂ ಮಧ್ಯೇ ಬುಭುತ್ಸೂನಾಂ**

---

ಆತ್ಮತತ್ವಜ್ಞಾನವೇ ಬ್ರಹ್ಮವಿದ್ಯೆಯೆಂದು ಹೇಳು ॥ ೨೬ ॥ ಶಿಷ್ಯ:—ಆತ್ಮಜ್ಞಾನವೂ, ದ್ವೈತವಿಸ್ಮೃತಿಯೂ ಇವೆರಡೂ ಸೇರಿ ಬ್ರಹ್ಮವಿದ್ಯೆಯೆಂದು ಹೇಳಿದರೋ? ಗುರು—ಘಟಾದಿಗಳಿಗೆ ಆತ್ಮಜ್ಞಾನವಿಲ್ಲದಿದ್ದರೂ ದ್ವೈತವಿಸ್ಮೃತಿಯು ಚನ್ನಾಗಿರುತ್ತಾಗಿ ಘಟಾದಿಗಳು ಅರ್ಧಬ್ರಹ್ಮವಿದ್ಯೆಯುಳ್ಳವನೆನ್ನಬೇಕಾಗುತ್ತದೆ. ಆದ್ದರಿಂದ ಇಂತಹ ದುರಾಕ್ಷೇಪಣೆ ಮಾಡದೆ ಆತ್ಮಜ್ಞಾನವೇ ಬ್ರಹ್ಮವಿದ್ಯೆಯೆಂದು ತಿಳಿ ॥೨೭॥ ಸ್ವಾಮಿ! ಕಾಮಕ್ರೋಧಾದಿಗಳು ಇವೆಲ್ಲಾ ಯಾರಿಗೆ? ಗುರು:—ಇವೆಲ್ಲ ಶರೀರವ ಜ್ವರಗಳು. ಹೇಗೆಂದರೆ—ವಾತ ಪಿತ್ತ ಶ್ಲೇಷ್ಮಗಳಿಂದ ಹುಟ್ಟಿದ ರೋಗಗಳು ದುರ್ಗಂಧತ್ವ, ಕುರೂಪತ್ವ, ಜರಾಮರಣಾದಿಗಳೆಲ್ಲಾ ಸ್ಥೂಲಶರೀರ ಜ್ವರಗಳು ॥ ೨೮ ॥ ಕಾಮ, ಕ್ರೋಧ, ಲೋಭ, ಮದ, ಮತ್ಸರ, ಶಾಂತಿ, ದಾಂತ್ಯಾದಿಗಳೆಲ್ಲಾ ಲಿಂಗದೇಹ ಜ್ವರಗಳು. ಆತ್ಮನು ಕಾರಣ ಶರೀರದಲ್ಲಿ ನಷ್ಟನಾಗಿ ತನ್ನನ್ನು ಇತರರನ್ನು ಕಾಣೆನೆಂಬುದೇ ಕಾರಣ ಶರೀರ ಜ್ವರವು ॥ ೨೯ ॥ ಈ ಜ್ವರಗಳು ಈ ಮೂರು ಶರೀರಗಳಲ್ಲಿ ಸ್ವಾಭಾವಿಕವಾಗಿರುವವು. ದೇಹನಾಶವಾದರೆ ಇವು ನಾಶವಾಗುವವು ॥ ೩೦ ॥ ಜೀವನು ಸ್ವಯಂಪ್ರಕಾಶನಾದ್ದರಿಂದ ಈ ಜ್ವರಗಳ ಸಂಪರ್ಕ ಅವನಿಗೆ ಎಂದಿಗೂ ಇಲ್ಲವು ॥ ೩೧ ॥ ಸ್ವರ್ಗಾಪೇಕ್ಷೆಯುಳ್ಳ ಜ್ಞಾನಹೀನರಾದ ಕರ್ಮಿಗಳಿಗೆ ಕರ್ಮಪ್ರವೃತ್ತಿಯಲ್ಲಿ ಆಗ್ರಹ ಉಂಟಾಗುವುದು ನ್ಯಾಯವೇ. ಅವರು ಆ ಕರ್ಮಪ್ರಯತ್ನವನ್ನೇ ಮಾಡಬೇಕು ॥ ೩೨ ॥ ಅಂತಹ ಕರ್ಮಿಗಳ ಮಧ್ಯದಲ್ಲಿ ವಾಸಮಾಡುವ ಪ್ರಾರಬ್ಧವು ಜ್ಞಾನಿಗೆ ಉಂಟಾದರೆ ಆಗ ಜ್ಞಾನಿಯೂ ಕೂಡ

ಯದಾತಿಷ್ಠೇತ್ತದಾ ಪುನಃ । ಬೋಧಾಯೈಷಾಂ ಕ್ರಿಯಾಸ್ಸರ್ವಾ ದೂಷಯನ್ ತ್ಯಜತಿ ಸ್ವಯಂ ॥ ೩೪ ॥ ಉಪವೃಧ್ನಾತಿ ಚಿತ್ತಂ ಚೇತ್ ದ್ವಾದಾಸೌನತು ತತ್ವ ವಿತ್ । ಸಬುದ್ಧಿಂ ಮರ್ದಯನ್ ದೃಷ್ಟೋ ಘಟತತ್ವಸ್ಯ ವೇದಿತಾ ॥ ೩೫ ॥ ತತ್ವ ವಿದ್ಯದಿನಧ್ಯಾಯೇತ್ಪ್ರವರ್ತೇತತದಾಬಹಿಃ । ಪ್ರವರ್ತೇತ ಸುಖೇ ನಾಯಂ ಕೋ ಬಾಧಸ್ತತ್ಪ್ರವರ್ತನಾತ್ ॥೩೬॥ ಅತಿಪ್ರಸಂಗ ಇತಿ ಚೇತ್ಪ್ರಸಂಗಂ ತಾವದೀ ರಯ । ಪ್ರಸಂಗೋ ವಿಧಿ ಶಾಸ್ತ್ರಂ ಚ ನ ತತ್ತತ್ವವಿದಂ ಪ್ರತಿ ॥ ೩೭ ॥ ವರ್ಣಾ ಶ್ರಮ ವಯೋವಸ್ಥಾಭಿ ಮಾನೋಯಸ್ಯ ವಿದ್ಯತೇ । ತಸ್ಯೈವ ಚ ನಿಷೇಧಾಶ್ಚ ವಿಧಯಸ್ಸ ಕಲಾ ಅಪಿ ॥ ೩೮ ॥ ಸಮಾಧಿ ಮಥ ಕರ್ಮಾಣಾಮಾಕರೋತು ಕರೋ ತುವಾ । ಹೃದಯೇನಾಸ್ತ ಸರ್ವಾರ್ಥೋ ಮುಕ್ತ ಏವೋತ್ರಮಾಶ್ರಯಃ ॥ ೩೯ ॥ ನೈಷ್ಕರ್ಮ್ಯೇಣನತಸ್ಯಾರ್ಥಸ್ತಸ್ಯಾರ್ಥೋಽಸ್ತಿನಕರ್ಮಭಿಃ । ನಸಮಾಧಾನಜಪ್ಯಾಭ್ಯಾಂ ಯಸ್ಯ ನಿರ್ವಾಸನಂ ಮನಃ ॥ ೪೦ ॥ ಆತ್ಮಾಸಂಗಸ್ತತೋಽನ್ಯತ್ಸ್ಯಾದಿಂದ್ರಜಾಲಂ

---

ಕರ್ಮಿಗಳಿಗನುಸಾರವಾಗಿ ಮನಸಾ ವಾಚಾ ಕಾಯಾ ಕರ್ಮವನ್ನು ಮಾಡುತ್ತಾನೆ ॥ ೩೩ ॥ ವಿಚಾರಿಗಳ ಮಧ್ಯದಲ್ಲಿದ್ದರೆ ಅವರಿಗೆ ಜ್ಞಾನಸಿದ್ಧಿಗೋಸ್ಕರ ಕರ್ಮವನ್ನೆಲ್ಲ ದೂಷಣೆಮಾಡಿ ತಾನೂ ಕರ್ಮವನ್ನು ಬಿಡುತ್ತಾನೆ ॥ ೩೪ ॥ ಶಿಷ್ಯ:—ಮನಸ್ಸನ್ನು ನಿಗ್ರಹಮಾಡತಕ್ಕವನೇ ತತ್ವಜ್ಞನೆಂದು ಹೇಳಬೇಕಲ್ಲವೆ ? ಗುರು:—ಮನಸ್ಸನ್ನು ನಿಗ್ರಹಿಸತಕ್ಕವನು ದೇವತಾಧ್ಯಾನಮಾಡತಕ್ಕವನೆನಿಸುತ್ತಾನೆ. ಅವನು ತತ್ವಜ್ಞನಲ್ಲ. ಇದು ಘಟವೆಂಬ ಘಟಸ್ವರೂಪವನ್ನು ತಿಳಿಯುವ ವಿಷಯದಲ್ಲಿ ಮನೋನಿಗ್ರಹ ಮಾಡಿದ್ದು ಎಲ್ಲೂ ನೋಡಿಲ್ಲ ॥೩೫॥ ಶಿಷ್ಯ:—ತತ್ವಜ್ಞನಿಗೆ ಧ್ಯಾನವಿಲ್ಲದಮೇಲೆ ಚಿತ್ತವು ಬಹಿರ್ಮುಖವಾಗಿ ನಾನಾ ವಿಷಯದಲ್ಲಿ ಪ್ರವರ್ತಿಸುವುದೆ? ಗುರು:—ಸುಖವಾಗಿ ಎಲ್ಲಿ ಬೇಕಾದರು ಪ್ರವರ್ತಿಸಲಿ. ಆ ಪ್ರವರ್ತನದಿಂದ ಇವನಿಗೇನೂ ಬಾಧಕವಿಲ್ಲ ॥ ೩೬ ॥ ಶಿಷ್ಯ:—ಹಾಗಾದರೆ ಅತಿಪ್ರಸಂಗವಾಗುತ್ತಲಾ ? ಗುರು:–ಆ ಪ್ರಸಂಗವಾವುದೋ ಸ್ವಲ್ಪ ಹೇಳು. ಶಿಷ್ಯ:–ಹೀಗಿರಬೇಕು, ಈ ರೀತಿ ಮಾಡಬೇಕೆಂದು ಹೇಳುವ ವಿಧಿಶಾಸ್ತ್ರವೇ ಪ್ರಸಂಗವು ಗುರು:–ಆ ವಿಧಿ ಶಾಸ್ತ್ರವು ತತ್ವಜ್ಞನ ಸಮೀಪವನ್ನು ಸೇರುವುದಿಲ್ಲ ॥ ೩೭ ॥ ವರ್ಣಾಶ್ರಮಗಳಲ್ಲಿ ಅಭಿಮಾನವುಳ್ಳವನಿಗೇ ಆ ವಿಧಿನಿಷೇಧಗಳಿಲ್ಲ ॥ ೩೮ ॥ ಸಮಾಧಿಗಳನ್ನು ಮಾಡಲಿ, ಬಿಡಲಿ ಯಾವಾಗ್ಗೆ ಕರ್ತೃತ್ವ ನಾಶವಾಯಿತೋ ಆವಾಗಲೇ ಮುಕ್ತನಾಗಿರುತ್ತಾನೆ ॥ ೩೯ ॥ ಯಾವನ ಮನಸ್ಸು ನಿರ್ವಾಸನವಾಗಿದೆಯೋ ಅವನು ಕರ್ಮ ಮಾಡಿವರೂ ಬಿಟ್ಟರೂ ಸಮಾಧಿ ಜಪಗಳಿಂದಲೂ ಯಾವ ಪ್ರಯೋಜನವೂ ಯಿಲ್ಲ ॥ ೪೦ ॥ ಶಿಷ್ಯ:—ಜ್ಞಾನಿಗೆ ವಾಸನೆ ಹೇಗಿಲ್ಲ ? ಗುರು:—ಆತ್ಮನು

**ಹಿ ಮಾಯಿಕಂ । ಇತ್ಯ ಚಂಚಲ ನಿರ್ಣೀತೇಃ ಕುತೋ ಮನಸಿ ವಾಸನಾ ॥೪೧॥ ತದಿತ್ಥಂ ತತ್ವವಿಜ್ಞಾನೇ ಸಾಧನಾನುಪಮರ್ದನಾತ್। ಜ್ಞಾನಿನಾಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕಂ ॥೪೨॥ ಅಥೋಽಯ ಮಾತ್ಮಗೀತಾಯ ಮಪಿಸ್ಪಷ್ಟ ಮುದೀರಿತಃ । ವಿಚಾರಕ್ಷಮ ಆತ್ಮಾನ ಮುಪಾಸೀತೇತಿ ಸಂತತಂ ॥೪೩॥ ಯಥಾ ಪುಷ್ಕರವರ್ಣೇಽಸ್ಮಿನ್ನಪಾಮಶ್ಲೇಷಣಂ ತಥಾ । ವೇದನಾದೂರ್ಧ್ವಮಾಗಾಮಿ ಕರ್ಮಣೋ ಶ್ಲೇಷಣಂ ಬುಧೇ ॥ ೪೪ ॥ ಯಸ್ಯ ನಾಹಂಕೃತೋ ಭಾವೋ ಬುದ್ಧಿ ರ್ಯಸ್ಯ ನಲಿಪ್ಯತೇ । ಹತ್ವಾಪಿ ಸ ಇಮಾ್ ಲೋಕಾನ್ನಿಹಂತಿನನಿಬಧ್ಯತೇ ॥೪೫॥ ಮಾತಾಪಿತ್ರೋರ್ವಧಸ್ತೇಯ ಭ್ರೂಣಹತ್ಯಾನ್ಯದೀ ದೃಶಂ । ನಮುಕ್ತಿಂ ನಾಶ ಯೇತ್ಕಿಂತು ಮುಖಕಾಂತಿರ್ನನಶ್ಯತಿ ॥ ೪೬ ॥ ಜಕ್ಷನ್ಕ್ರೀಡನ್ರತಿಂ ಪ್ರಾಪ್ತ ಸ್ತ್ರೀ ಭಿರ್ಯಾನೈಸ್ತಥೇತರೈಃ । ಶರೀರಂ ನಸ್ಮರೇತ್ಪ್ರಾಣಃ ಕರ್ಮಣಾ ಜೀವಯೇದಮುಂ ॥**

---

ಅಸಂಗನು. ತದ್ವ್ಯತಿರಿಕ್ತವಾದ ಜಗತ್ತೆಲ್ಲಾ ಇಂದ್ರಜಾಲದಂತೆ ಮಿಥ್ಯೆಯೆಂಬ ಜ್ಞಾನವು ಚಲಿಸದೇ ಇರುವವನಿಗೆ ವಾಸನೆಯೆಲ್ಲಿ ಬಂತು ? ॥ ೪೧ ॥ ಈ ರೀತಿ ಜ್ಞಾನವು ದೃಢಪಟ್ಟಿರಲು ಬಾಹ್ಯವಸ್ತುಗಳು ನಾಶವಾಗದೆ ಇರೋಣದರಿಂದ ಜ್ಞಾನಿಯು ರಾಜ್ಯ ಲೌಕೀಕ ವ್ಯವಹಾರದಲ್ಲಿ ಇರಬಹುದು ॥ ೪೨ ॥ ಶಿಷ್ಯ:—ಮನಸ್ಸನ್ನು ನಿರೋಧಿಸಿ, ದೇವತೋಪಾಸನೆಯನ್ನು ಮಾಡಬೇಕೆಂನು ಶಾಸ್ತ್ರದಲ್ಲಿ ಹೇಳಿರುವುದಲ್ಲ ? ಗುರು:—ಅದು ಬ್ರಹ್ಮವಿಚಾರದಲ್ಲಿ ಮನಸ್ಸು ನಿಲ್ಲದೇ ಸಂಶಯದಿಂದ ಕೂಡಿರುವವರಿಗೆ ಹೇಳಿದ್ದು. ಎಲೈ ಶಿಷ್ಯನೇ ! ಇದೇ ವಿಷಯವಾಗಿ ಆತ್ಮಗೀತೆಯಲ್ಲಿ ಹೇಳಿರುವುದನ್ನು ಕೇಳು : ಬ್ರಹ್ಮವಿಚಾರದಲ್ಲಿ ಮನಸ್ಸು ಒಡಂಬಡದೇ ಇರುವ ಮನುಷ್ಯನು ಸರ್ವದಾ ಮನಸ್ಸನ್ನು ನಿರೋಧಮಾಡಿ ದೇವತೋಪಾಸನೆಯನ್ನೇ ಮಾಡಬೇಕು ॥ ೪೩ ॥ ಶಿಷ್ಯ:—ಜ್ಞಾನಿಗೆ ಹಿಂದೆ ಮಾಡಿದ ಪಾಪವೆಲ್ಲ ಜ್ಞಾನದಿಂದ ನಾಶವಾಗಬಹುದು. ಜ್ಞಾನೋತ್ಪತ್ತಿಯಾದನಂತರ ಮಾಡಿದ ಕರ್ಮಕ್ಕೆ ಬದ್ಧನಾಗುವುದಿಲ್ಲವೇ ? ಗುರು—ನೀರೊಳಗಿರುವ ತಾವರೆ ಎಲೆಗೆ ನೀರು ಹೇಗೆ ಅಂಟುವುದಿಲ್ಲವೋ ಅದರಂತೆ ಜ್ಞಾನೋತ್ತರ ಕಾಲದಲ್ಲಿ ಮಾಡಿದ ಕರ್ಮಗಳ ಲೇಪವು ಜ್ಞಾನಿಗಿಲ್ಲ ॥ ೪೪ ॥ ಶಿಷ್ಯ:—ಪಾಪಕರ್ಮ ಮಾಡಿದಾಗಾದರೂ ಅದು ಹೇಗೆ ಅಂಟುವುದಿಲ್ಲ. ಗುರು:—ಯಾವನಿಗೆ ದೇಹವೇ ನಾನೆಂಬ ಭಾವನೆ ನಾಶವಾಗಿದೆಯೋ, ಯಾವನ ಬುದ್ಧಿ ನಾನು ಮಾಡುತ್ತೇನೆಂದು ಕರ್ಮದಲ್ಲಿ ಲೇಪಿಸುವುದಿಲ್ಲವೋ ಅವನು ಎಂಥಾ ಪಾಪ ಮಾಡಿದಾಗ್ಯೂ ಬದ್ಧನಾಗುವುದಿಲ್ಲವೆಂದು ಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ ॥೪೫॥ ಶಿಷ್ಯ:—ಈಗ ನೀವು

ಹೇಳಿದಂತೆ ಇತರ ಶಾಸ್ತ್ರದಲ್ಲೇನಾದರೂ ಪ್ರಮಾಣವಿದೆಯೇ ? ಗುರು:—ಶಾಸ್ತ್ರದಲ್ಲಿರುವುದಂತಿರಲಿ, ಶ್ರುತಿಯಲ್ಲೇ ಇದೆ. ಅದೇನೆಂದರೆ : ಮಾತಾಪಿತೃವಧೆ, ಭ್ರೂಣಹತ್ಯಾ ಮೊದಲಾದ ಪಾಪಗಳು ಮುಕ್ತಿಯನ್ನು ಕೆಡಿಸಲಾರವು. ಇಷ್ಟೇ ಅಲ್ಲ. ಇವನ್ನೆಲ್ಲಾ ಮಾಡಿದಾಗ್ಯೂ ಜ್ಞಾನಿಯ ಮುಖಕಾಂತಿಯು ಎಂದಿಗೂ ಕೆಡುವುದಿಲ್ಲ. ಈ ರೀತಿ ಶ್ರುತಿಯಲ್ಲಿ ಹೇಳಿದೆ. ಎಲೈ ಪುತ್ರನೇ ! ತತ್ವಜ್ಞಾನಿಗೆ ಯಾವ ವಿಧದಿಂದಲೂ ಚ್ಯುತಿ ಬರಲಾರದು ; ಆದ್ದರಿಂದ ಮುಮುಕ್ಷುಗಳು ಲೋಕಾಯತರ ದುರಾಕ್ಷೇಪಗಳಿಗೆ ಹೆದರದೆ ಧೈರ್ಯವನ್ನವಲಂಬಿಸಿ ನಿರಂತರದಲ್ಲೂ ತತ್ವವಿಚಾರ ಸುಧಾರಸಪಾನಮತ್ತರಾಗಿ, ಜನನ ಮರಣಾತ್ಮಕ ಭವದುಃಖ ಮಹಾರಣ್ಯವನ್ನು ಸುಟ್ಟು, ನಿತ್ಯ ನಿರತಿಶಯಾದ್ವಿತೀಯ ಬ್ರಹ್ಮಾನಂದವನ್ನು ಹೊಂದಬೇಕೆಂಬುವುದೇ ಸಿದ್ಧಾಂತಮಾಗಿರ್ಕು೦ ॥ ೪೭ ॥



## ವಿ ಜ್ಞಾ ಪ ನಾ

ಅಸೂಯಾರಹಿತರಾದ ಮಹಾತ್ಮರನ್ನು ಪ್ರಾರ್ಥಿಸುವುದೇನೆಂದರೆ :—

ಈ ಗ್ರಂಥದಲ್ಲಿ ನನ್ನ ಅಜ್ಞಾನದಿಂದ ಉಂಟಾದ ಅರ್ಥದೋಷವಿದ್ದಲ್ಲಿ ಅದನ್ನು ಗಣಿಸದೆ ಸಾರಗ್ರಹಣತತ್ಪರರಾಗಿ ಸಂತೋಷಿಸಬೇಕು. ಈ ಗ್ರಂಥಾಭಿಪ್ರಾಯ ವಿಷಯವಾಗಿ ಮೂಢರು ಮಾಡತಕ್ಕ ಆಕ್ಷೇಪಕ್ಕೆ ನಾನು ಬದ್ಧನಲ್ಲ. ಏಕೆಂದರೆ :—ಅವರ ದುರಾಕ್ಷೇಪಣೆಗಳೆಲ್ಲಾ (ಶಿವ, ವಿಷ್ಣು, ವ್ಯಾಸರು, ವಾಲ್ಮೀಕಿ, ದತ್ತಾತ್ರೇಯರು, ಋಭು, ಕಪಿಲ, ಶಂಕರಾಚಾರ್ಯರು, ವಿದ್ಯಾರಣ್ಯರು, ಮಧುಸೂದನ ಸರಸ್ವತೀ ಸ್ವಾಮಿಗಳು, ವಿಮರ್ಶಾನಂದನಾಥರು, ವಾಸುದೇವ ಯತೀಂದ್ರರು) ಇವರೇ ಮುಂತಾದ ಮಹಾತ್ಮರಿಗಾಗುತ್ತದೆ. ಇಂತವರನ್ನು ದೂಷಿಸಿ ಆ ಫಲವನ್ನು ಬೇಕಾದವರು ಕಟ್ಟಿಕೊಳ್ಳಬಹುದು.

**ಇತಿ ಶ್ರೀ ಶಿವರಾಮಸೂರಿ ವಿರಚಿತಾಯಾಂ**
**ಮುಕ್ತಿಮಾರ್ಗ ಪ್ರದೀಪಿಕಾಯಾಂ ಪೂರ್ವಭಾಗ ಸಮಾಪ್ತಃ.**



# ವೇದಾಂತ ಮುಕ್ತಿಮಾರ್ಗ ಪ್ರದೀಪಿಕೆಯಲ್ಲಿ

## ಉತ್ತರಭಾಗ ಪ್ರಾರಂಭವು

ಎಲೈ ಪುತ್ರನೇ! ಈ ಬ್ರಹ್ಮಜ್ಞಾನವು ಅಧ್ಯಾರೋಪ ಮತ್ತು ಅಪವಾದಗಳಿಂದ ಉಂಟಾಗಬೇಕು.

### ಅಧ್ಯಾರೋಪ

ರಜ್ಜುವಿನಲ್ಲಿ ಅಜ್ಞಾನದಿಂದ ಸರ್ಪವನ್ನು ಕಲ್ಪಿಸುವಂತೆ ನಿಷ್ಪ್ರಪಂಚಸ್ವರೂಪನಾದ ಪರಮಾತ್ಮನಲ್ಲಿ ಪ್ರಪಂಚದ ಆರೋಪವೇ ಅಧ್ಯಾರೋಪವೆನಿಸುವುದು ; ಈ ಅಧ್ಯಾರೋಪವು ವಸ್ತುಸ್ವರೂಪದ ಅಜ್ಞಾನದಿಂದ ಉಂಟಾಯಿತು. ಈ ಅಜ್ಞಾನವು ಅನಾದಿಯಾದದ್ದು. ಈ ಅಜ್ಞಾನಕ್ಕೆ ಮೂಲಪ್ರಕೃತಿ, ಗುಣಸಾಮ್ಯ, ಅವ್ಯಕ್ತ, ಪ್ರಧಾನಗಳೆಂಬ ಪರ್ಯಾಯನಾಮಗಳಿರುತ್ತವೆ.

### ಪ್ರಕೃತಿಸ್ವರೂಪ

ಮೂಲಪ್ರಕೃತಿಯೆಂದರೆ ಕಪ್ಪು ಬಿಳಪು ಕೆಂಪು ಧಾರಗಳು ಮೂರನ್ನೂ ಸೇರಿಸಿದ-ಹಗ್ಗದಂತೆ ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳು ಸೇರಿ ಒಂದಾಗಿ ಕೂಡಿರುವುದಕ್ಕೆ ಪ್ರಕೃತಿಯೆಂದು ಹೆಸರು. ಈ ಪ್ರಕೃತಿಯೇ ಬ್ರಹ್ಮನ ಶಕ್ತಿಯೆನಿಸುವುದು. ಲೋಕದಲ್ಲಿ ಬೆಲ್ಲವನ್ನೂ ಅದರಲ್ಲಿರುವ ಮಧುರವನ್ನೂ, ಕಸ್ತೂರಿಯನ್ನೂ ಅದರ ಪರಿಮಳವನ್ನೂ, ಚಿನ್ನವನ್ನೂ ಅದರ ರೂಪವನ್ನೂ ಹೇಗೆ ಬೇರ್ಪಡಿಸುವುದಕ್ಕಾಗುವುದಿಲ್ಲವೋ ಅದರಂತೆ ಬ್ರಹ್ಮವನ್ನೂ ತಚ್ಛಕ್ತಿಯನ್ನೂ ಭಿನ್ನಿಸುವುದಕ್ಕಾಗುವುದಿಲ್ಲ.

### ಸೃಷ್ಟಿಕ್ರಮ

ಸೃಷ್ಟಿಗೆ ಪೂರ್ವದಲ್ಲಿ ಈ ಪ್ರಪಂಚವೆಲ್ಲಾ ಅದ್ವಯಬ್ರಹ್ಮಸ್ವರೂಪವೇ ಆಗಿತ್ತು. ಬಳಿಕ ಬ್ರಹ್ಮನು ನಾನೇ ಬಹು ರೂಪನಾಗುತ್ತೇನೆಂದು ಇಚ್ಛೈಸಲು ಬ್ರಹ್ಮನಿಂದ ಪ್ರಕೃತಿ ಹುಟ್ಟಿತು. ಅನಂತರ ಆ ಬ್ರಹ್ಮನು ಪ್ರಕೃತಿಯನ್ನು ನೋಡಲು ಅದು ಶುದ್ಧಸತ್ವ, ಮಲಿನಸತ್ವ, ತಾಮಸೀ ಎಂದು ಮೂರು ವಿಧವಾಯಿತು. ತಮೋಗುಣ ರಜೋಗುಣಗಳಿಂದ ಆವರಿಸಲ್ಪಡದಿರುವ ಸತ್ವಗುಣವು ಶುದ್ಧ ಸತ್ವವೆನಿಸುವುದು; ತಮೋಗುಣ ರಜೋಗುಣಳಿಂದ ಆವರಿಸಲ್ಪಟ್ಟಿರುವ ಸತ್ವಗುಣವು ಮಲಿನಸತ್ವವೆನಿಸುವುದು. ಇವೆರಡರಲ್ಲಿ ಶುದ್ಧಸತ್ವವೇ ಮಾಯೆಯಾಯಿತು. ಮಲಿನಸತ್ವವು ಅವಿದ್ಯೆಯಾಯಿತು. ಕೇವಲ ತಮೋಗುಣವೇ ತಾಮಸೀಯೆನಿಸಿತು.

## ಜೀವೇಶ್ವರರು ಕಾರಣಸೃಷ್ಟಿ

ಪೂರ್ವೋಕ್ತ ಬ್ರಹ್ಮನ ಪ್ರತಿಬಿಂಬವು ಮಾಯೆಯಲ್ಲಿ ಬಿತ್ತು. ಆ ಮಾಯೆಯಲ್ಲಿರುವ ಬ್ರಹ್ಮಪ್ರತಿಬಿಂಬವು ಮಾಯೆಯನ್ನು ತನ್ನ ಸ್ವಾಧೀನಮಾಡಿಕೊಂಡು ಈಶ್ವರನಾದನು. ಮತ್ತೆ ಆ ಬ್ರಹ್ಮಪ್ರತಿಬಿಂಬವು ಅವಿದ್ಯೆಯೊಳಗೆ ಬೀಳಲು ಆ ಅವಿದ್ಯೆಯೊಳಗಿರುವ ಬ್ರಹ್ಮಪ್ರತಿಬಿಂಬವು ಅವಿದ್ಯೆಗೆ ಸ್ವಾಧೀನವಾಗಿ ಜೀವನೆನಿಸಿತು. ಅವಿದ್ಯೆಯು ನಾನಾವಿಧವಾಗಿರೋಣದರಿಂದ ತದ್ಗತಜೀವನೂ ಕೂಡ ಅನಂತಜೀವರಾದರು. ಈ ಅವಿದ್ಯೆಯೇ ಜೀವನಿಗೆ ಕಾರಣದೇಹವಾಯಿತು. ಬಳಿಕ ಈಶ್ವರನು ತಾಮಸೀಪ್ರಕೃತಿಯನ್ನು ನೋಡಲು ಅದು ಆವರಣಶಕ್ತಿ, ವಿಕ್ಷೇಪಶಕ್ತಿ ಎಂದು ಎರಡುವಿಧವಾಯಿತು. ಇವೆರಡರಲ್ಲಿ ಅವರಣಶಕ್ತಿ ಮಾತ್ರ ಅಭಾನಾವರಣ ಅತತ್ವಾವರಣವೆಂದು ಮತ್ತೆರಡು ಪ್ರಕಾರವಾಯಿತು. ಇದರಲ್ಲಿ ಬ್ರಹ್ಮನು ಇಲ್ಲ ಎಂಬ ಭ್ರಾಂತಿಯನ್ನುಂಟುಮಾಡುವುದಕ್ಕೆ ಕಾರಣವಾದದ್ದು ಅತತ್ವಾವರಣವು. ಬ್ರಹ್ಮನು ಕಾಣುವುದಿಲ್ಲವೆಂಬ ಭ್ರಾಂತಿಯನ್ನುಂಟುಮಾಡುವುದಕ್ಕೆ ಕಾರಣವಾದದ್ದು ಅಭಾನಾವರಣವು. ಇವೆರಡು ಅವಿದ್ಯೆಯಲ್ಲಿ ಸೇರಿ ಜೀವನನ್ನು ಆವರಿಸಿದವು. ಬಳಿಕ ಈಶ್ವರನು ಈ ಜೀವರ ಸುಖದುಃಖಗಳ ಅನುಭವಕ್ಕೆ ಸೂಕ್ಷ್ಮಸೃಷ್ಟಿಯನ್ನು ಮಾಡಿದನು. ಹೇಗೆಂದರೆ:—

## ಕಾರಣವಿಚಾರ

ಲೋಕದಲ್ಲಿ ಕಾರಣವಿಲ್ಲದೆ ಕಾರ್ಯ ಹುಟ್ಟುವುದಿಲ್ಲ. ಕಾರಣವಾದರೋ ಉಪಾದಾನಕಾರಣ, ಸಹಕಾರಿಕಾರಣ, ನಿಮಿತ್ತಕಾರಣವೆಂದು ಮೂರು ವಿಧವಾಗಿರುತ್ತದೆ. ಇದಕ್ಕೆ ದೃಷ್ಟಾಂತ ಹೇಗೆಂದರೆ:—ಘಟವು ಕಾರ್ಯವೆನಿಸುವುದು. ಈ ಘಟ ಹುಟ್ಟುವುದಕ್ಕೆ ಪೂರ್ವೋಕ್ತ ಮೂರು ಕಾರಣಗಳು ಬೇಕು. ಆ ಮೂರು ಕಾರಣಗಳಲ್ಲಿ ಮಣ್ಣೇ ಉಪಾದಾನಕಾರಣ. ಕುಂಬಾರನು ನಿಮಿತ್ತಕಾರಣನು. ಚಕ್ರದಂಡಾದಿಗಳು ಸಹಕಾರಿಕಾರಣಗಳು. ಮೇಲೆ ಹೇಳಿದ ಮೂರು ಕಾರಣಗಳಲ್ಲಿ ಸಹಕಾರಿಕಾರಣವು ನಿಮಿತ್ತಕಾರಣದಲ್ಲೇ ಸೇರುತ್ತೆಂದು ಅದ್ವೈತ ಸಿದ್ಧಾಂತ ಗ್ರಂಥಗಳಲ್ಲಿ ಉಪಾದಾನಕಾರಣ ನಿಮಿತ್ತಕಾರಣಗಳೆರಡನ್ನೇ ಹೇಳಿದುತ್ತೆ. ಇದರಂತೆ ಜಗತ್ತೂ ಕೂಡ ಉಪಾದಾನಕಾರಣ ನಿಮಿತ್ತಕಾರಣಗಳೆರಡರಿಂದ ಹುಟ್ಟಿರುವುದು. ಜಗತ್ತು ಕಾರ್ಯವಾಯಿತು. ಇದಕ್ಕೆ ಪೂರ್ವೋಕ್ತ ಈಶ್ವರನೇ ಉಭಯಕಾರಣನೂ ಆಗಿದ್ದಾನೆ. ಆದರೆ ಒಬ್ಬನೇ ಎರಡು ಕಾರಣಗಳಾಗಿ ಆಗುವುದು ಉಂಟೇ ಎಂದರೆ ಉಂಟು ಹೇಗೆಂದರೆ:—

### ಕಾರಣ ದೃಷ್ಟಾಂತ

ಲೋಕದಲ್ಲಿ ಊರ್ಣನಾಭಿಯೆಂಬ ಜಾಡರಹುಳವು ದಾರದಿಂದ ಗೂಡನ್ನು ಕಟ್ಟುತ್ತೆ. ಆ ದಾರವನ್ನು ಬೇರೆ ಸ್ಥಳದಿಂದ ತರವುದಿಲ್ಲ. ಅದರ ಶರೀರವೇ ದಾರವಾಗುತ್ತೆ. ಇದರಲ್ಲಿ ದಾರವೇ ಕಾರ್ಯವಾಯಿತು. ಹುಳುವು ತನ್ನ ದೇಹವನ್ನು ಅವಲಂಬಿಸಿಕೊಂಡು ಉಪಾದಾನ ಕಾರಣವು ಬುದ್ಧಿಯನ್ನವಲಂಬಿಸಿಕೊಂಡು ನಿಮಿತ್ತ ಕಾರಣವೂ ಕೂಡ ತಾನೇ ಆಗಿದೆ. ಇದರಂತೆ ಈಶ್ವರನು ವಿಕ್ಷೇಪಶಕ್ತಿಯನ್ನವಲಂಬಿಸಿ ಉಪಾದಾನಕಾರಣನು ಮಾಯೆಯನ್ನವಲಂಬಿಸಿ ನಿಮಿತ್ತಕಾರಣನು ಕೂಡ ಒಬ್ಬನೇ ಆಗಿದ್ದಾನೆಂದು ತಿಳಿಯತಕ್ಕದ್ದು.

### ಸೂಕ್ಷ್ಮಸೃಷ್ಟಿ

ಬಳಿಕ ಈಶ್ವರನು ಉಳಿದ ವಿಕ್ಷೇಪಶಕ್ತಿಯೊಡನೆ ಕೂಡಲು ಅದರಿಂದ ಆಕಾಶ ಹುಟ್ಟಿತು. ಅದರಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಜಲವೂ, ಜಲದಿಂದ ಭೂಮಿಯೂ ಹುಟ್ಟಿತು. ಈ ಪಂಚಭೂತಗಳಿಗೆ ಅಪಂಚೀಕೃತ ಭೂತಗಳೆಂದು ಹೆಸರು. ಇವುಗಳಲ್ಲಿ ಆಕಾಶ ಮೊದಲುಗೊಂಡು ಪ್ರತಿಯೊಂದು ಭೂತವೂ ಕ್ರಮವಾಗಿ ಹತ್ತುಹತ್ತು ಭಾಗಗಳಿಂದ ಕಡಿಮೆಯಾಗಿರುತ್ತವೆ. ಈ ಭೂತಗಳಲ್ಲಿ ಕಾರಣಪ್ರಕೃತಿಯಲ್ಲಿರುವ ಸತ್ವಾಂಶ, ರಜೋಂಶ, ತಮೋಂಶಗಳು ಮೂರೂ ಇರುತ್ತವೆ. ಆಕಾಶದಲ್ಲಿ ಶಬ್ದವೊಂದೇ ಗುಣ. ವಾಯುವಿನಲ್ಲಿ ನಿಜಗುಣಸ್ಪರ್ಶ ಕಾರಣವಾದ ಆಕಾಶದ ಶಬ್ದವೂ ಸೇರಿ ಅಂತು ಎರಡು ಗುಣಗಳಿವೆ. ಅಗ್ನಿಯಲ್ಲಿ ನಿಜಗುಣ ರೂಪವೊಂದು ಕಾರಣವಾದ ವಾಯುವಿನ ಶಬ್ದಸ್ಪರ್ಶಗಳು ಕೂಡಿ ಅಂತು ಮೂರು ಗುಣಗಳಿವೆ. ಜಲದಲ್ಲಿ ನಿಜಗುಣರಸವು ಕಾರಣವಾದ ಅಗ್ನಿಯ ಶಬ್ದಸ್ಪರ್ಶರೂಪಗಳು ಸೇರಿ ಅಂತೂ ನಾಲ್ಕು ಗುಣಗಳಿವೆ. ಭೂಮಿಯಲ್ಲಿ ನಿಜಗುಣ ಗಂಧವು ಕಾರಣವಾದ ಜಲದ ಶಬ್ದಸ್ಪರ್ಶ ರೂಪ ರಸಗಳೂ ಸೇರಿ ಅಂತೂ ಐದು ಗುಣಗಳಿವೆ. ಈ ಗುಣಗಳ ಸ್ವರೂಪ ಹೇಗೆಂದರೆ: ಆಕಾಶದಲ್ಲಿ ಪ್ರತಿಧ್ವನಿಯೆಂಬ ಶಬ್ದ, ವಾಯುವಿನಲ್ಲಿ ವಿಸ್‌ಎಂಬ ಶಬ್ದ, ಅನುಷ್ಣಾ ಶೀತಸ್ಪರ್ಶ ಇವೆರಡು. ಅನುಷ್ಣಾ ಶೀತಸ್ಪರ್ಶವೆಂದರೆ ಅಷ್ಟು ಬಿಸಿಯೂ ಅಷ್ಟು ಶೀತವೂ ಇಲ್ಲದೆ ಸಮವಾಗಿರುವುದು. ಅಗ್ನಿಯಲ್ಲಿ ಭಗ್ಗ್ ಭಗ್ಗ್ ಎಂಬ ಶಬ್ದವೂ, ಉಷ್ಣಸ್ಪರ್ಶವೂ, ಪ್ರಕಾಶರೂಪವೂ ಈ ಮೂರು ಇರುತ್ತವೆ. ಜಲದಲ್ಲಿ ಬುಳುಬುಳು ಎಂಬ ಶಬ್ದವೂ, ಶೀತಸ್ಪರ್ಶವೂ ಶುಕ್ಲಪಕ್ಷವೂ, ಮಧುರ ರಸವೂ ಈ ನಾಲ್ಕು ಇರುತ್ತೆ. ಭೂಮಿಯಲ್ಲಿ ಗಡಗಡಯೆಂಬ ಶಬ್ದವೂ, ಮೃದು ಕಠಿನ ಸ್ಪರ್ಶವೂ,

ನೀಲ ಶುಕ್ಲಾದಿ ನಾಮರೂಪವೂ, ಮಧುರಾದಿ ನಾನಾ ರಸವೂ, ಸುಗಂಧ ದುರ್ಗಂಧಗಳೆಂಬ ಗಂಧವೂ ಕೂಡಿ ಐದು ಗುಣಗಳಿರುವುವು. ಬಳಿಕ ಆಕಾಶದ ಸತ್ವಾಂಶದಿಂದ ಶ್ರೋತ್ರೇಂದ್ರಿಯವೂ,ವಾಯುವಿನ ಸತ್ವಾಂಶದಿಂದ ತ್ವಗಿಂದ್ರಿಯವೂ, ಅಗ್ನಿಯ ಸತ್ವಾಂಶದಿಂವ ನೇತ್ರೇಂದ್ರಿಯವೂ. ಜಲದ ಸತ್ವಾಂಶದಿಂದ ಜಿಹ್ವೇದ್ರಿಯವೂ ಭೂಮಿ ಸತ್ವಾಂಶದಿಂದ ಘ್ರಾಣೇಂದ್ರಿಯವೂ ಹುಟ್ಟಿತು. ಇವೈದೂ ಜ್ಞಾನೇಂದ್ರಿಯಗಳು. ಇವು ಭೂತಗಳ ಸತ್ವಾಂಶದಿಂದ ಹುಟ್ಟಿದವಾದ್ದರಿಂದ ಜ್ಞಾನೇಂದ್ರಿಯಗಳೆನಿಸಿದವು. ಬಳಿಕ ಸಕಲ ಭೂತಗಳ ಸತ್ವಾಂಶಗಳನ್ನು ಒಂದಾಗಿ ಸೇರಿಸಲು ಆ ಸಮಷ್ಟಿಯಿಂದ ಅಂತಃಕರಣ ಹುಟ್ಟಿತು. ಅದು ವೃತ್ತಿಭೇದದಿಂದ ಮನ, ಬುದ್ಧಿ, ಚಿತ್ತ, ಅಹಂಕಾರನೆಂದೂ ನಾಲ್ಕು ವಿಧವಾಯಿತು. ಇವರಲ್ಲಿ ಅಹಂಕಾರವು ಬುದ್ಧಿಯಲ್ಲೂ, ಚಿತ್ತವು ಮನಸ್ಸಿನಲ್ಲೂ ಸೇರಿ ಮನೋಬುದ್ಧಿಗಳೆಂದು ಅಂತಃಕರಣವೆರಡಾಯಿತು. ಬಳಿಕ ಆಕಾಶದ ರಾಜಸಾಂಶದಿಂದ ವಾಗಿಂದ್ರಿಯವೂ, ವಾಯುವಿನ ರಾಜಸಾಂಶದಿಂದ ಪಾಣೇಂದ್ರಿಯವೂ, ಅಗ್ನಿಯ ರಾಜಸಾಂಶದಿಂದ ಪಾದೇಂದ್ರಿಯವೂ ಜಲದ ರಾಜಸಾಂಶದಿಂದ ಗುದೇಂದ್ರಿಯವೂ, ಭೂಮಿಯ ರಾಜಸಾಂಶದಿಂದ ಉಪಸ್ಥೇಂದ್ರಿಯವೂ ಹುಟ್ಟಿತು. ಇವೈದೂ ಕರ್ಮೇಂದ್ರಿಯಗಳು. ಇವು ರಾಜಸಾಂಶದಿಂದ ಹುಟ್ಟಿದವಾಗಿ ಕರ್ಮೇಂದ್ರಿಯಗಳೆನಿಸಿದವು. ಬಳಿಕ ಈ ಭೂತಗಳ ರಾಜಸಾಂಶಗಳನ್ನೆಲ್ಲಾ ಒಟ್ಟು ಸೇರಲು ಆ ಸಮಷ್ಟಿಯಿಂದ ಪ್ರಾಣವೆಂಬುವದೊಂದು ಹುಟ್ಟಿತು. ಅದು ವೃತ್ತಿಭೇದದಿಂದ ಪಂಚವಿಧವಾಯಿತು. ಹೇಗೆಂದರೆ—ಹೃದಯದಲ್ಲಿ ಸೇರಿ ಪ್ರಾಣವೆಂತಲೂ, ಗುದಸ್ಥಾನದಲ್ಲಿ ಸೇರಿ ಅಪಾನವೆಂತಲೂ, ನಾಭಿಸ್ಥಾನವನ್ನು ಸೇರಿ ಸಮಾನವೆಂತಲೂ, ಕಂಠಸ್ಥಾನದಲ್ಲಿ ಸೇರಿ ಉದಾನವೆಂತಲೂ, ಮಿಕ್ಕ ಎಲ್ಲಾ ದೇಹದಲ್ಲೂ ಸೇರಿ ವ್ಯಾನವೆಂತಲೂ ಈ ಐದು ವಿಧವಾಯಿತು. ಅಂತು ಪೂರ್ವೋಕ್ತ ಜ್ಞಾನೇಂದ್ರಿಯ ಪಂಚಕ, ಕರ್ಮೇಂದ್ರಿಯ ಪಂಚಕ, ಮನಸ್ಸು, ಬುದ್ಧಿ ಈ ಹದಿನೇಳು ತತ್ವಗಳೂ ಸೇರಿ ಒಂದಾಗಿ ಲಿಂಗಶರೀರವಾಯಿತು. ಇದಕ್ಕೇನೆ ಸೂಕ್ಷ್ಮದೇಹವೆಂದು ಹೆಸರು. ಈ ಲಿಂಗದೇಹವೇನೇ ಮನುಪ್ರಳಯ, ಬ್ರಹ್ಮಪ್ರಳಯ, ವಿಷ್ಣುಪ್ರಳಯ, ರುದ್ರಪ್ರಳಯ, ಮಹಾಪ್ರಳಯಗಳಲ್ಲೂ ನಾಶವಾಗದೆ ಪಾಪಕರ್ಮದಿಂದ ಯಾತನಾದೇಹವೆಂಬ ಸ್ಥೂಲ ದೇಹವನ್ನು ಪ್ರವೇಶಿಸಿ, ನರಕದ ದುಃಖಾನುಭವಮಾಡಿ ಆ ಫಲ ತೀರಲು ಆ ಯಾತನಾದೇಹವನ್ನು ಬಿಟ್ಟು ಆ ಪಾಪಕರ್ಮಕ್ಕನುಗುಣವಾದ ಕ್ರಿಮಿಕೀಟ ಪತಂಗ ಸ್ಥಾವರಾದಿ ಸ್ಥೂಲ ಶರೀರಗಳನ್ನು ಹೊಂದುತ್ತಿಹುದು. ಪುಣ್ಯಕರ್ಮ

ದಿಂದ ದಿವ್ಯದೇಹವನ್ನು ಪ್ರವೇಶಿಸಿ ಸ್ವರ್ಗಾದಿಗಳಲ್ಲಿ ಭೋಗವನ್ನನುಭವಿಸಿ ಅದು ತೀರಲು ಮರಳಿ ಭೂಲೋಕಕ್ಕೆ ಬಂದು ಆ ಪುಣ್ಯಕರ್ಮಕ್ಕನುಗುಣವಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಲೋಕವ್ಯವಹಾರಕ್ಕೆ ಸಂಬಂಧಪಟ್ಟ ಸ್ಥೂಲದೇಹವನ್ನು ಪ್ರವೇಶಿಸುತ್ತಾ ಎಂದಿಗೂ ಈ ಲಿಂಗದೇಹವು ನಾಶವಾಗುವುದಿಲ್ಲ. ಈ ಲಿಂಗದೇಹದ ಭಂಗವೇನೇ ಮುಕ್ತಿಯೆನಿಸುವುದು. ಬ್ರಹ್ಮಜ್ಞಾನದಿಂದಲೇನೆ ಲಿಂಗದೇಹ ನಾಶವಾಗತಕ್ಕದ್ದು. ಬ್ರಹ್ಮಜ್ಞಾನದಿಂದ ಲಿಂಗದೇಹವು ಭಂಗವಾಗಲು ಪ್ರಾರಬ್ಧಕರ್ಮದವರಿಗೂ ಈ ಸ್ಥೂಲದೇಹವಿದ್ದು ಸ್ಥೂಲದೇಹ ನಾಶಾನಂತರ ಜೀವನಿಗೆ ನಿಲ್ಲುವುದಕ್ಕೆ ಸ್ಥಾನವಿಲ್ಲದೆ ತಾನು ಯಾವ ಬ್ರಹ್ಮನಿಂದ ತೋರಿದನೋ ಆ ಬ್ರಹ್ಮನಲ್ಲಿ ಸೇರುತ್ತಾನೆ. ಮಡಕೆಯಲ್ಲಿರುವ ನೀರು ಇಂಗಿದರೆ ಅದರೊಳಗಿರುವ ಸೂರ್ಯನ ಪ್ರತಿಬಿಂಬವು ನಿಲ್ಲುವುದಕ್ಕೆ ಸ್ಥಾನವಿಲ್ಲದೆ ತನಗೆ ಬಿಂಬವಾದ ಸೂರ್ಯನಲ್ಲಿ ಹೇಗೆ ಐಕ್ಯವಾಗುವುದೋ ಅದರಂತೆ ಜೀವನು ಬ್ರಹ್ಮನಲ್ಲಿ ಸೇರುವನು.

### ಸ್ಥೂಲಸೃಷ್ಟಿಕ್ರಮ

ಬಳಿಕೀಲಿಂಗದೇಹವು ವಾಸಮಾಡುವುದಕ್ಕೆ ಸ್ಥೂಲದೇಹ ಬೇಕಾಗಿರುವುದರಿಂದ ಸ್ಥೂಲಪ್ರಪಂಚ ಸೃಷ್ಟಿಗಾಗಿ ಪೂರ್ವೋಕ್ತ ಪಂಚಭೂತಗಳಲ್ಲಿ ಸಾತ್ವಿಕಾಂಶ ರಾಜಸಾಂಶಗಳೆರಡೂ ಕಳೆಯಲು, ಉಳಿದ ತಮೋಂಶದಿಂದ ಕೂಡಿರುವ ಭೂತಗಳನ್ನು ಪಂಚೀಕರಣ ಮಾಡುತ್ತಾನೆ. ಪಂಚೀಕರಣಕ್ರಮ ಹೇಗೆಂದರೆ:—

### ಪಂಚೀಕರಣ

ಆಕಾಶಾದಿ ಪಂಚಭೂತಗಳಲ್ಲಿ ಪ್ರತಿಯೊಂದು ಭೂತವನ್ನು ಎರಡೆರಡು ಭಾಗಮಾಡಿ ಅದರಲ್ಲಿ ಆಯಾಯ ಭೂತದ ದ್ವಿತೀಯ ಭಾಗವನ್ನು ಬಿಟ್ಟು ಪ್ರಥಮ ಭಾಗವನ್ನು ಮಾತ್ರ ಮತ್ತೆ ನಾಲ್ಕು ನಾಲ್ಕು ಭಾಗಗಳನ್ನು ಮಾಡಿ ಈ ನಾಲ್ಕು ಭಾಗಗಳಲ್ಲಿ ಒಂದೊಂದನ್ನು ತಮ್ಮ ತಮ್ಮ ಸ್ವಂತ ದ್ವಿತೀಯ ಭಾಗದಲ್ಲಿ ಸೇರಿಸದೆ ಇತರ ಭೂತಗಳ ದ್ವಿತೀಯ ಭಾಗದಲ್ಲಿ ಬೆರೆಸಲು ಇಪ್ಪತ್ತೈದು ತತ್ವಗಳಾಗುವುವು.

### ಆಕಾಶ ಪಂಚೀಕರಣ

ಹೇಗೆಂದರೆ—ಭಾಗಮಾಡಲ್ಪಟ್ಟ ಆಕಾಶದ ದ್ವಿತೀಯ ಭಾಗವೇ ಜ್ಞಾತೃವೆನಿಸುವುದು. ಉಳಿದ ಪ್ರಥಮ ಭಾಗದ ನಾಲ್ಕು ಭಾಗಗಳಲ್ಲಿ ಒಂದು ಭಾಗ ವಾಯುವಿನ ದ್ವಿತೀಯಭಾಗದಲ್ಲಿ ಸೇರಿ ಮನೋಗೋಳಕವಾಯಿತು. ಅಗ್ನಿಯ ದ್ವಿತೀಯ ಭಾಗದಲ್ಲಿ ಸೇರಿ ಬುದ್ಧಿಗೋಳವಾಯಿತು. ಜಲದ ದ್ವಿತೀಯ ಭಾಗ

ದಲ್ಲಿ ಸೇರಿ ಚಿತ್ತಗೋಳಕವಾಯಿತು. ಭೂಮಿಯ ದ್ವಿತೀಯ ಭಾಗದಲ್ಲಿ ಸೇರಿ ಅಹಂಕಾರಗೋಳಕವಾಯಿತು. ಇದು ಆಕಾಶಪಂಚಕ.

**ವಾಯುಪಂಚೀಕರಣ**

ಭಾಗಮಾಡಲ್ಪಟ್ಟ ವಾಯುವಿನ ದ್ವಿತೀಯಭಾಗವೇ ವ್ಯಾನಗೋಳಕವಾಯಿತು. ಉಳಿದ ಪ್ರಥಮಭಾಗದ ನಾಲ್ಕು ಭಾಗಗಳಲ್ಲಿ ಒಂದು ಭಾಗವು ಆಕಾಶದ ದ್ವಿತೀಯ ಭಾಗದಲ್ಲಿ ಸೇರಿ ಸಮಾನಗೋಳಕವಾಯಿತು. ವಾಯುವಿನ ದ್ವಿತೀಯ ಭಾಗದಲ್ಲಿ ಸೇರಿ ಉದಾನಗೋಳಕವಾಯಿತು. ಅಗ್ನಿಯ ದ್ವಿತೀಯ ಭಾಗದಲ್ಲಿ ಸೇರಿ ಅಪಾನಗೋಳಕವಾಯಿತು. ಭೂಮಿಯ ದ್ವಿತೀಯ ಭಾಗದಲ್ಲಿ ಸೇರಿ ಪ್ರಾಣಗೋಳಕವಾಯಿತು. ಇದು ವಾಯುಪಂಚಕ.

**ಅಗ್ನಿ ಪಂಚೀಕರಣ**

ಅಗ್ನಿಯಲ್ಲಿ ದ್ವಿತೀಯ ಭಾಗವು ನೇತ್ರೇಂದ್ರಿಯ ಗೋಳಕವಾಯಿತು. ಉಳಿದ ಪ್ರಥಮ ಭಾಗದ ನಾಲ್ಕು ಭಾಗಗಳಲ್ಲಿ ಒಂದು ಭಾಗವು ಆಕಾಶದ ದ್ವಿತೀಯ ಭಾಗದಲ್ಲಿ ಸೇರಿ ಶ್ರೋತ್ರೇಂದ್ರಿಯಗೋಳಕವಾಯಿತು. ವಾಯುವಿನ ದ್ವಿತೀಯ ಭಾಗದಲ್ಲಿ ಸೇರಿ ಚರ್ಮೇಂದ್ರಿಯ ಗೋಳಕವಾಯಿತು. ಭೂಮಿಯ ದ್ವಿತೀಯ ಭಾಗದಲ್ಲಿ ಸೇರಿ ಘ್ರಾಣೇಂದ್ರಿಯ ಗೋಳಕವಾಯಿತು. ಇವು ಅಗ್ನಿಪಂಚಕ.

**ಜಲಪಂಚೀಕರಣ**

ಜಲದಲ್ಲಿ ದ್ವಿತೀಯಭಾಗವೇ ರಸವಾಯಿತು. ಉಳಿದ ನಾಲ್ಕು ಭಾಗಗಳಲ್ಲಿ ಒಂದು ಭಾಗವು ಆಕಾಶದ ದ್ವಿತೀಯಭಾಗದಲ್ಲಿ ಸೇರಿ ಶಬ್ದವಾಯಿತು. ವಾಯುವಿನ ದ್ವಿತೀಯಭಾಗದಲ್ಲಿ ಸೇರಿ ಸ್ಪರ್ಶವಾಯಿತು. ಅಗ್ನಿಯ ದ್ವಿತೀಯ ಭಾಗದಲ್ಲಿ ಸೇರಿ ರೂಪವಾಯಿತು. ಭೂಮಿಯ ದ್ವಿತೀಯ ಭಾಗದಲ್ಲಿ ಸೇರಿ ಗಂಧವಾಯಿತು. ಇವು ಜಲಪಂಚಕ. ಇದಕ್ಕೆ ತನ್ಮಾತ್ರಗಳೆಂದು ಹೆಸರು.

**ಪೃಥ್ವೀಪಂಚೀಕರಣ**

ಪೃಥ್ವಿಯ ದ್ವಿತೀಯ ಭಾಗವೇ ಗುದೇಂದ್ರಿಯ ಗೋಳಕವಾಯಿತು. ಉಳಿದ ಪ್ರಥಮಭಾಗದ ನಾಲ್ಕು ಭಾಗಗಳಲ್ಲೊಂದು ಭಾಗವು ಆಕಾಶದ ದ್ವಿತೀಯ ಭಾಗದಲ್ಲಿ ಸೇರಿ ವಾಗಿಂದ್ರಿಯ ಗೋಳಕವಾಯಿತು. ವಾಯುವಿನ ದ್ವಿತೀಯ ಭಾಗದಲ್ಲಿ ಸೇರಿ ಪಾಣೇಂದ್ರಿಯ ಗೋಳಕವಾಯಿತು. ಅಗ್ನಿಯ ದ್ವಿತೀಯ ಭಾಗದಲ್ಲಿ ಸೇರಿ ಪಾದೇಂದ್ರಿಯ ಗೋಳಕವಾಯಿತು. ಜಲದ ದ್ವಿತೀಯ ಭಾಗದಲ್ಲಿ ಸೇರಿ ಉಪಸ್ಥೇಂದ್ರಿಯ ಗೋಳಕವಾಯಿತು. ಇವು ಪೃಥ್ವೀಪಂಚಕ.

ಈಗ ಹೇಳಿದ ಇಪ್ಪತ್ತೈದು ತತ್ವಗಳು ಸೇರಿ ಸ್ಥೂಲದೇಹವಾಯಿತು. ಇದರಿಂದ ಅನೇಕ ಬ್ರಹ್ಮಾಂಡಗಳಾದವು. ಈ ಪಂಚೀಕರಣವು ಇನ್ನೂ ಅನೇಕ ವಿಧ ವಾಗಿರುತ್ತದೆ. ಅದನ್ನೆಲ್ಲ ಇಲ್ಲಿ ಬರೆದರೆ ಪ್ರಥಮಾಭ್ಯಾಸಿಗಳ ಬೋಧೆಗೆ ಬರುವು ದಿಲ್ಲವಾದ್ದರಿಂದಲೂ, ಈಗ ಗ್ರಂಥವು ಪಾಮರರಿಗೆ ಸುಲಭವಾಗಿ ತನ್ನ ಸ್ವರೂಪ ವನ್ನು ತಿಳಿಯುವುದಕ್ಕಾಗಿಯೇ ಪ್ರಾರಂಭಿಸಿರೋಣದರಿಂದ ವಿಶೇಷವಾಗಿ ಬರೆಯ ಲಿಲ್ಲ. ಪ್ರಕೃತದಲ್ಲಿ ಸ್ಥೂಲದೇಹ, ಸೂಕ್ಷ್ಮದೇಹ, ಕಾರಣದೇಹವೆಂದು ದೇಹ ಗಳು ಮೂರಾದವು. ಇವುಗಳಲ್ಲಿ ಪ್ರತಿಯೊಂದು ದೇಹವೂ ಸಮಷ್ಟಿ ವಷ್ಟಿಯೆಂಬ ಭೇದದಿಂದ ಎರಡು ಪ್ರಕಾರ. ಸಮಷ್ಟಿ ದೇಹಾಭಿಮಾನಿ ಈಶ್ವರನು. ವ್ಯಷ್ಟಿದೇಹಾ ಭಿಮಾನಿ ಜೀವನು. ಈ ಸಮಷ್ಟಿ ವ್ಯಷ್ಟಿಗಳನ್ನು ತಿಳಿಯುವುದು ಹೇಗೆಂದರೆ—

## ಸಮಷ್ಟಿ ವ್ಯಷ್ಟಿ ದೃಷ್ಟಾಂತ

ಒಬ್ಬ ದೇವದತ್ತನಿಗೆ ಸಹಸ್ರ ಮಾವಿನಗಿಡಗಳಿಂದ ಕೂಡಿದ ಒಂದು ವನ ವಿರುತ್ತದೆ. ಆ ದೇವದತ್ತನು ಒಬ್ಬೊಬ್ಬ ರೈತನಿಗೆ ಒಂದೊಂದು ಮರದ ಪ್ರಕಾರ ವನದಲ್ಲಿದ್ದ ಸಾವಿರ ಮರಗಳನ್ನು ಸಾವಿರ ಜನಗಳಿಗೆ ಗುತ್ತಿಗೆ ಕೊಡುತ್ತಾನೆ. ಗುತ್ತಿಗೆ ಪಡೆದ ಜನಗಳಲ್ಲಿ ಪ್ರತಿಯೊಬ್ಬನಿಗೂ ತಮ್ಮ ತಮ್ಮ ಮರದಲ್ಲಿ ಮಾತ್ರ ಅಭಿಮಾನವಿರುತ್ತೆ. ಇತರ ಮರಗಳಲ್ಲಿ ಅಭಿಮಾನವಿರುವುದಿಲ್ಲ. ದೇವದತ್ತನಿಗಾ ದರೋ ಸಹಸ್ರಮರಗಳಿಂದ ಕೂಡಿದ ವನದಲ್ಲಿಯೇ ಅಭಿಮಾನವಿರುತ್ತೆ. ಇದರಲ್ಲಿ ಇದರಲ್ಲಿ ವನವು ಸಮಷ್ಟಿ, ಒಂದು ಮರವು ವ್ಯಷ್ಟಿಯಾಯಿತು. ಇದರಂತೆ ಒಂದು ದೇಹವು ವ್ಯಷ್ಟಿಯಾಯಿತು. ಮಿಕ್ಕ ಎಲ್ಲ ದೇಹಗಳು ಸಮಷ್ಟಿಯಾಯಿತು. ಒಂದು ಮರದಲ್ಲಿ ಅಭಿಮಾನವುಳ್ಳ ರೈತನಂತೆ ಒಂದು ದೇಹದಲ್ಲಿ ಅಭಿಮಾನವುಳ್ಳ ಜೀವನು ಎಲ್ಲಾ ಮರಗಳಿಂದ ಕೂಡಿದ ವನದಲ್ಲಿ ಅಭಿಮಾನವುಳ್ಳ ದೇವದತ್ತನಂತೆ ಸಮಷ್ಟಿ ದೇಹಾಭಿಮಾನವುಳ್ಳ ಈಶ್ವರನು. ಇದರಿಂದ ಸಮಷ್ಟಿಕಾರಣದೇಹ, ವ್ಯಷ್ಟಿಕಾರಣ ದೇಹ, ಸಮಷ್ಟಿಲಿಂಗದೇಹ, ವ್ಯಷ್ಟಿಲಿಂಗದೇಹ, ಸಮಷ್ಟಿಸ್ಥೂಲದೇಹ, ವ್ಯಷ್ಟಿ ಸ್ಥೂಲದೇಹ ಎಂಬುದಾಗಿ ಆರು ವಿಧವಾಯಿತು. ಆಯಾಯ ದೇಹಗಳಲ್ಲಿ ಅಭಿ ಮಾನವುಂಟಾದಾಗ ಜೀವೇಶ್ವರರಿಗೆ ಬೇರೆ ಬೇರೆ ಹೆಸರುಗಳುಂಟಾಗುತ್ತೆ. ಹೇಗೆಂದರೆ:—ಕಾರಣದೇಹದಲ್ಲಿ ಅಭಿಮಾನಿಸಿದಾಗ್ಗೆ ಈಶ್ವರನಿಗೆ ಅವ್ಯಾಕೃತನೆಂ ತಲೂ, ಜೀವನಿಗೆ ಪ್ರಾಜ್ಞನೆಂತಲೂ ಹೆಸರು. ಸೂಕ್ಷ್ಮದೇಹದಲ್ಲಿ ಅಭಿಮಾನಿ ದಾಗ್ಗೆ ಈಶ್ವರನಿಗೆ ಹಿರಣ್ಯಗರ್ಭನೆಂತಲೂ, ಜೀವನಿಗೆ ತೈಜಸನೆಂತಲೂ ಹೆಸರು. ಸ್ಥೂಲದೇಹಾಭಿಮಾನದಿಂದ ಈಶ್ವರನಿಗೆ ವಿರಾಟ್ ಎಂತಲೂ, ಜೀವನಿಗೆ ವಿಶ್ವನೆಂ

ತಲೂ ಹೆಸರು. ಈ ಸಕಲ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಕಾರ್ಯಗಳಿಗಾಗಿ ಈಶ್ವರನೇ ಸತ್ವಗುಣದಲ್ಲಿ ಸೇರಿ ವಿಷ್ಣುವಾದನು. ರಜೋಗುಣದಲ್ಲಿ ಸೇರಿ ಬ್ರಹ್ಮನಾದನು. ತಮೋಗುಣದಲ್ಲಿ ಸೇರಿ ರುದ್ರನಾದನು. ಮತ್ತು ಜೀವನಿಗೆ ಜಾಗ್ರತ್ಸ್ವಪ್ನ ಸುಷುಪ್ತಿಗಳೆಂಬ ಮೂರವಸ್ಥೆಗಳುಂಟು. ಹೇಗಂದರೆ:—

## ಅವಸ್ಥಾತ್ರಯ

ಜೀವನು ಸ್ಥೂಲದೇಹ, ನೇತ್ರಸ್ಥಾನ ಇವುಗಳಲ್ಲಿ ಅಭಿಮಾನಿಸಿ ಸ್ಥೂಲದಲ್ಲಿ ಹೇಳಿದ ಸಕಲ ಕರಣಗಳಿಂದ ವಿಶ್ವನೆಂಬ ಹೆಸರನ್ನು ಪಡೆದು ವನಿತಾಪುತ್ರಾದಿ ಸಕಲ ವಿಷಯಸುಖದುಃಖಾದಿಗಳನ್ನು ಅನುಭವಿಸುವುದೇ ಜಾಗ್ರದವಸ್ಥೆಯೆನಿಸುತ್ತೆ. ಇದೇ ಜೀವನು ಸೂಕ್ಷ್ಮಶರೀರ ಕಂಠಸ್ಥಾನಗಳಲ್ಲಿ ಅಭಿಮಾನಿಸಿ ಅವಿದ್ಯೆಯಿಂದ ತತ್ಕಾಲದಲ್ಲಿ ಕಲ್ಪಿಸಲ್ಪಟ್ಟ ಸುಖದುಃಖಗಳನ್ನು ತೈಜಸನೆಂಬ ಹೆಸರಿನಿಂದ ಅನುಭವಿಸುವುದೇ ಸ್ವಪ್ನಾವಸ್ಥೆಯೆನಿಸುವುದು. ಬಳಿಕ ಸಕಲ ಕರಣಗಳೂ ಕಾರಣದೇಹದಲ್ಲಿ ಲಯವಾಗಲು ಸರ್ವವ್ಯಾಪಾರವನ್ನುಳಿದು ಕಾರಣದೇಹ ಹೃದಯಸ್ಥಾನದಲ್ಲಿ ಜೀವನು ಅಭಿಮಾನಿಸಿ ಪ್ರಾಜ್ಞನೆಂಬ ಹೆಸರಿನಿಂದ ತನಗೆ ಸ್ವಾಭಾವಿಕವಾಗಿರುವ ಆನಂದವನ್ನು ಅನುಭವಿಸುವುದೇ ಸುಷುಪ್ತಿಯೆನಿಸುತ್ತದೆ. ಎಲೈ ಶಿಷ್ಯನೆ ! ಮೊದಲಿನಲ್ಲಿ ಹೇಳಿದ ಪ್ರಕೃತ್ಯುತ್ಪತ್ತಿ ಮೊದಲುಗೊಂಡು ಇದು ವರೆವಿಗೆ ಹೇಳಿದ್ದೆಲ್ಲಾ ಅಧ್ಯಾರೋಪವೆನಿಸುತ್ತದೆ.

## ಅಪವಾದ

ಮಡಿಕೆಯು ತನಗೆ ಕಾರಣವಾದ ಮಣ್ಣಿಗೆ ಭಿನ್ನಿಸದೆ ಹೇಗೆ ಮಣ್ಣೇ ಆಗಿರುತ್ತೋ, ತಂತುಗಳಿಂದ ಪಟವು ತನಗೆ ಕಾರಣವಾದ ತಂತುಗಳಿಗೆ ಭಿನ್ನಿಸದೆ ತಂತುವೇ ಹೇಗೆ ಆಗಿದೆಯೋ ಇದರಂತೆ ಸಕಲ ಪ್ರಪಂಚವು ತನಗೆ ಕಾರಣವಾದ ಬ್ರಹ್ಮಕ್ಕೆ ಭಿನ್ನಿಸದೆ ಬ್ರಹ್ಮವೇ ಆಗಿದೆ. ಗಾರುಡಿಗನ ಮಂತ್ರಶಕ್ತಿಯಿಂದ ಕಲ್ಪಿಸಲ್ಪಟ್ಟ ಚಿತ್ರಗಳು ಹೇಗೆ ಸುಳ್ಳಾಗಿ ಗಾರುಡಿ ಮಂತ್ರವನ್ನು ತಿಳಿಯದ ಮೂಢರಿಗೆ ಆಶ್ಚರ್ಯವನ್ನುಂಟುಮಾಡಿ ಸತ್ಯವಾಗಿ ತೋರುತ್ತದೆಯೋ ಅದರಂತೆ ಮಾಯಾಕಲ್ಪಿತವಾದ ಈ ಜಗತ್ತು ಬ್ರಹ್ಮಜ್ಞಾನವಿಲ್ಲದವರಿಗೆ ಬ್ರಹ್ಮವ್ಯತಿರಿಕ್ತವೆನಿಸಿ ಸತ್ಯವಾಗಿ ತೋರುತ್ತಾ ಆಶ್ಚರ್ಯವನ್ನುಂಟುಮಾಡುತ್ತದೆ. ಆದ್ದರಿಂದ ಪರಮಾರ್ಥವಾಗಿ ತೋರತಕ್ಕದ್ದೆಲ್ಲಾ ಪುಸಿ ; ಬ್ರಹ್ಮ ಒಂದು ಸತ್ಯ. ಬ್ರಹ್ಮಾತಿರಿಕ್ತ ವಸ್ತುವು ಇಲ್ಲವೆಂಬುವುದೇ ಅಪವಾದವೆನಿಸುವುದು. ಈ ರೀತಿ ಸದ್ಗುರುಕಟಾಕ್ಷವಂ ಪಡೆದು ಯಾವನು ಅಧ್ಯಾರೋಪಾಪವಾದಗಳಿಂದ ಬ್ರಹ್ಮಸ್ವರೂಪವಂ ತಿಳಿದು ಆ ಬ್ರಹ್ಮವೇ

ನಾನೆಂಬ ಜ್ಞಾನದಿಂದ ಕೂಡಿರುತ್ತಾನೋ ಅವನೇ ಜೀವನ್ಮುಕ್ತನೆಂದು ವೇದಾಂತ ಸಿದ್ಧಾಂತ.

ಶಿಷ್ಯ:—ಎಲೈ ಗುರುನಾಥನೇ ! ಈ ಬ್ರಹ್ಮವಿಚಾರಕ್ಕೆ ಅಧಿಕಾರಿಯಾರು? ಯಾವನಿಗೆ ಈ ಬ್ರಹ್ಮವಿದ್ಯೆಯನ್ನು ಹೇಳಿದರೆ ಸಾರ್ಥಕವಾಗುತ್ತದೆ? ಈ ವಿಷಯವನ್ನು ಹೇಳಬೇಕೆಂದು ಕೇಳಲು, ಗುರುವರನಿಂತೆಂದನು.—

**ಅಧಿಕಾರಿಲಕ್ಷಣ**

ಸಾಧನಚತುಷ್ಟಯ ಸಂಪನ್ನನೇ ಅಧಿಕಾರಿಯೆಂದು ಅನೇಕ ಶಾಸ್ತ್ರಗಳಲ್ಲಿ ಹೇಳಿರುತ್ತೆ. ಆದರೆ ಮುಖ್ಯಾಧಿಕಾರಿಯನ್ನು ಹೇಳುತ್ತೇನೆ. ಮನೆಯ ಸುತ್ತ ಬೆಂಕಿ ಹತ್ತಿ ಉರಿಯುತ್ತಿರಲು ಒಳಗಿರುವ ಪುರುಷನು ಪತ್ನೀಪುತ್ರಾದಿಗಳನ್ನೂ ಧನಧಾನ್ಯವನ್ನೂ ನೋಡದೆ ಎಲ್ಲವನ್ನೂ ಬಿಟ್ಟು ತಾನು ಬದುಕಿದರೆ ಸಾಕೆಂದು ಹೇಗೆ ಹೊರಕ್ಕೆ ಬರುತ್ತಾನೋ ಹಾಗೆ ಸರ್ವವ್ಯವಹಾರವನ್ನು ಬಿಟ್ಟು ದುಃಖ ತ್ರಯವನ್ನು ತಪ್ಪಿಸಿಕೊಂಡು ನಿತ್ಯನಿರತಿಶಯಾನಂದವನ್ನು ಯಾವಾಗ್ಗೆ ಹೊಂದು ವೆನೋ ಎಂಬ ತೀವ್ರವಾದ ಅಪೇಕ್ಷೆಯುಂಟಾಗಿರುವನೇ ಅಧಿಕಾರಿಯು.

**ದುಃಖತ್ರಯ**

ದುಃಖತ್ರಯವಾವುದೆಂದರೆ—ಮಲ, ಮೂತ್ರ, ರುಧಿರ, ಶುಕ್ಲ, ಮಜ್ಜಾ, ಕ್ರಿಮಿಗಳಿಂದ ಕೂಡಿದ ಜನನಿಯ ಜಠರದಲ್ಲಿ ಸೇರಿ, ಅಲ್ಲಾಡುವುದಕ್ಕಾಸ್ಪದ ವಿಲ್ಲದೆ, ದುರ್ಗಂಧವನ್ನು ಸಹಿಸಲಾರದೆ, ಅಲ್ಲಿರುವ ಕ್ರಿಮಿಗಳು ಕಚ್ಚುವುದರಿಂದ ಉಂಟಾಗುವ ಸಂಕಟವನ್ನು ತಡೆಯಲಾರದೆ, ಎಂದಿಗೆ ಈ ಮಹಾನರಕದಿಂದ ಬಿಡುಗಡೆಯನ್ನು ಪಡೆಯುವೆನೋ ಎಂದು ದುಃಖಿಸುವುದೇ ಗರ್ಭದುಃಖ. ಬಳಿಕ ದೇಹಪತನಕಾಲದಲ್ಲಿ ಕಾಲಾಂಜನಗಿರಿಗೆ ಸಮಾನರಾಗಿಯೂ, ಭೀಕರಕರಾಳವದನ ರಾಗಿಯೂ, ಕೆಂಡಗಳಂತೆ ಉರಿಯುತ್ತಿರುವ ಕಣ್ಣುಗಳುಳ್ಳವರಾಗಿಯೂ, ಖಡ್ಗ ಪಾಶಧಾರಿಗಳಾದ ಯಮಧೂತರ ದರ್ಶನವಾಗಲು ಭಯದಿಂದ ಮಲಮೂತ್ರಗ ಳನ್ನು ಬಿಟ್ಟು ಸ್ಮರಣೆತಪ್ಪಿ ಪತ್ನೀಪುತ್ರಾದಿಗಳನ್ನು ಮರೆತು, ಕಿರಾತನ ಕೈಗೆ ಸಿಕ್ಕಿದ ಪಶುವಿನಂತೆ ದಿಗ್ಭ್ರಮೆಯುಂಟಾಗಿ, ಬಿಕ್ಕಳಿಕೆ ಶ್ವಾಸಗಳು ಕಾಣಿಸಿಕೊಂಡು, ಇಹಲೋಕ ವ್ಯಾಪಾರವಿಲ್ಲದೆ ಯಮದೂತರನ್ನೆ ನೋಡುತ್ತಾ ದೂತರು ಪಾಶ ದಿಂದ ತಿವಿದು ಸೆಳೆಯುವ ಕಾಲದಲ್ಲಿ ಉಂಟಾಗುವ ದುಃಖವೇ ಮರಣದುಃಖವೆನಿ ಸುವುದು. ಆ ಬಳಿಕ ಯಮಲೋಕದಲ್ಲಿ ಯಾತನಾದೇಹದಲ್ಲಿ ಸೇರಿ ಕುಂಭೀಪಾಕ, ರೌರವ,ಮಹಾರೌರವ, ತಪ್ತಕಟಾಹ, ಮಹಾಗ್ನಿಕುಂಡ, ತಪ್ತಹಾಲಾಹಲ, ಮಹಾ

ಯಾತನ, ತಪ್ತಸಂಘಾತ, ಕಾಲಸೂತ್ರ, ಅಸಿಪತ್ರವನ ಮೊದಲಾದ ನರಕಗಳಲ್ಲಿ ಅನುಭವಿಸುವ ದುಃಖವೇ ನರಕದುಃಖವೆನಿಸುವುದು. ಈ ದುಃಖತ್ರಯಕ್ಕೆ ಸಿಕ್ಕದೆ ಎಂದಿಗೆ ಶಾಶ್ವತವಾದ ಆನಂದವನ್ನು ಪಡೆಯುವೆನೋ ಎಂದು ಹಗಲಿರುಳು ಅಪೇಕ್ಷಿಸುತ್ತಿರುವನೇ ಇವಕ್ಕೆ ಮುಖ್ಯಾಧಿಕಾರಿಯು. ಸ್ವಾತೀಮಳೆಯ ಹನಿಯು ಮುತ್ತಿನ ಚಿಪ್ಪಿನಲ್ಲಿ ಬಿದ್ದರೆ ಮುತ್ತಾಗುತ್ತೆ. ಮರಳಿನಲ್ಲಿ ಬಿದ್ದರೆ ಹನಿಯೇ ನಾಶವಾಗುತ್ತೆ. ಇದರಂತೆ ಅಧಿಕಾರಿಗೆ ತತ್ವವನ್ನು ಹೇಳಿದರೆ ಸಫಲವಾಗುತ್ತೆ. ಅನಧಿಕಾರಿಗೆ ಹೇಳಿದರೆ ವ್ಯರ್ಥವಾಗುತ್ತಾಗಿ ವೇದಾಂತೋಪದೇಶಕ್ಕೆ ಮೊದಲು ಅಧಿಕಾರಿಯಂ ಪರೀಕ್ಷಿಸಬೇಕು. ಶಿಷ್ಯ—ಸ್ವಾಮಿ ! ಜೀವಾತ್ಮನಿಗೆ ದುಃಖವು ಸ್ವಾಭಾವಿಕವೋ ಅಗಂತುಕವೋ ಇದನ್ನು ಕೃಪೆಮಾಡಬೇಕು. ಇಲ್ಲ ಸ್ವಾಭಾವಕವೆಂದರೆ ಸ್ವರೂಪವಾಗಿಯೇ ಇರುವುದು. ಉದಾಹರಣೆ—ಬೇವಿನಕಾಯಿಗೆ ಕಹಿ ಸ್ವರೂಪವಾಗಿರುವಂತೆ ಬೆಲ್ಲಕ್ಕೆ ಮಧುರವು ಸ್ವರೂಪವಾಗಿರುವಂತೆ ಎಂದು ತಿಳಿಯಬೇಕು. ಆಗಂತುಕ ಅಂದರೆ ಸ್ವಭಾವವಾಗಿಲ್ಲದ ಗುಣ; ಮತ್ತೊಂದರ ಸಂಪರ್ಕದಿಂದ ಉಂಟಾದದ್ದು. ಉದಾಹರಣೆ—ಅಕ್ಕಿಯ ಹಿಟ್ಟು ಮೊದಲಾದ ಪದಾರ್ಥಗಳಲ್ಲಿ ಸಪ್ಪೆಯು ಸ್ವಭಾವವಾಗಿರುತ್ತೆ. ಇದು ಬೆಲ್ಲದ ಸಂಪರ್ಕವಾದರೆ ಸಿಹಿಯಾಗುತ್ತೆ. ಇದು ಅಗಂತುಕವಾಯಿತು. ಇದರಂತೆ ಜೀವನಿಗೆ ದುಃಖವು ಸ್ವಾಭಾವಿಕವೋ ಆಗಂತುಕವೋ ಎಂದು ಕೇಳಿದ ಶಿಷ್ಯನಿಗೆ ಗುರುವಿಂತೆಂದನು—ಜೀವನು ಆಂರದಸ್ವರೂಪನಾದ್ದರಿಂದ ಜೀವನಿಗೆ ದುಃಖವು ಆಗಂತುಕವೇ ವಿನಹ ಸ್ವಾಭಾವಿಕವಲ್ಲ. ಶಿಷ್ಯ–ಸ್ವಾಭಾವಿಕವೆಂದು ಏತಕ್ಕೆ ಹೇಳಕೂಡದು? ಗುರು—ಬೇವಿನಕಾಯಿಯಲ್ಲಿ ಸ್ವಾಭಾವಿಕವಾದ ಕಹಿಯು ಹೇಗೆ ಹೋಗುವುದಿಲ್ಲವೊ, ಬೆಲ್ಲದಲ್ಲಿ ಸ್ವಾಭಾವಿಕವಾದ ಮಾಧುರ್ಯವು ಹೇಗೆ ನಾಶವಾಗದೋ ಅದರಂತೆ ದುಃಖವು ಜೀವನಿಗೆ ಸ್ವಭಾವವಾಗಿದ್ದಪಕ್ಷದಲ್ಲಿ ಸ್ವಾಭಾವಿಕವಾದ ದುಃಖವೆಂದಿಗೂ ನಾಶವಾಗತಕ್ಕುದಲ್ಲ. ಮತ್ತು ಸ್ವಾಭಾವಿಕವಾದ್ದು ಯಾವಾಗ್ಗೆ ನಾಶವಾಗದೆ ಹೋಯಿತೋ ಲೋಕದಲ್ಲಿ ಸುಖಪ್ರಾಪ್ತಿಗೋಸ್ಕರ ಯಾರೂ ಪ್ರಯತ್ನಪಡದೆ ಹೋಗಬೇಕಾಯಿತು. ಶಿಷ್ಯ—ದುಃಖವು ಸ್ವಾಭಾವಿಕವೂ ಆಗಲಿ, ಅದು ನಾಶವೂ ಆಗಲಿ. ಗುರು—ಸ್ವಭಾವವಾದ್ದು ಹೇಗೆ ನಾಶವಾದೀತು ? ಶಿಷ್ಯ—ಜಲಕ್ಕೆ ಶೈತ್ಯವು ಸ್ವಾಭಾವಿಕವಾದ್ದು. ಅಗ್ನಿಸಂಪರ್ಕದಿಂದ ಸ್ವಾಭಾವಿಕವಾದ ಶೈತ್ಯ ನಾಶವಾಗಿ ಜಲಕ್ಕೆ ಉಷ್ಣತ್ವವುಂಟಾಗುತ್ತೆ. ಬೆಂಕಿಯಲ್ಲಿ ಸ್ವಾಭಾವಿಕವಾದ ಉಷ್ಣತ್ವವು ಮೂಲಿಕಾಶಕ್ತಿಯಿಂದ ನಾಶವಾಗಿ ಶೈತ್ಯವುಂಟಾಗುತ್ತೆ. ಇದರಂತೆ ಜೀವನಿಗೂ

ಸ್ವಾಭಾವಿಕವಾದ ದುಃಖವಡಗದೆ ದೇವತಾಪೂಜಾದಿಗಳಿಂದ ನಾಶವಾಗಿ ಸುಖ ವುಂಟಾಗಬಹುದಲ್ಲ ? ಗುರು—ಅಗ್ನಿಯ ಶಕ್ತಿಯಿರುವವರಿಗೂ ಜಲದಲ್ಲಿ ಉಷ್ಣ ವಿದ್ದು ಅಗ್ನಿಶಕ್ತಿ ಯಾವಾಗ್ಗೆ ಕಡಿಮೆಯಾಗುತ್ತೋ ಆವಾಗ್ಗೆ ಉಷ್ಣತ್ವ ಹೋಗಿ ಸಾಭಾವಿಕವಾದ ಶೈತ್ಯವುಂಟಾಗುತ್ತೆ. ಮೂಲಿಕಾಶಕ್ತಿಯಿರುವವರಿಗೂ ಅಗ್ನಿಯಲ್ಲಿ ಶೈತ್ಯವಿದ್ದು ಮೂಲಿಕಾಶಕ್ತಿ ಕಡಮೆಯಾದಕೂಡಲೇ ಸ್ವಾಭಾವಿಕವಾದ ಉಷ್ಣ ವುಂಟಾಗುತ್ತೆ. ಇದರಂತೆ ದೇವತಾಪೂಜೆಯಿಂದ ಉಂಟಾದ ಪುಣ್ಯಫಲವಿರುವ ವರಿಗೂ ಜೀವನಿಗೆ ಸುಖವುಂಟಾಗಿ, ಅದು ತೀರಲು ಯಥಾಪ್ರಕಾರ ಸ್ವಾಭಾವಿಕ ವಾದ ದುಃಖವೊಂದೇ ಬರುತ್ತೆ. ಆದ್ದರಿಂದ ಸ್ವಾಭಾವಿಕವಾದ್ದು ಎಂದಿಗೂ ಕೆಡಲಾರದು. ಜೀವನಿಗೆ ದುಃಖವು ಎಂದಿಗೂ ಸ್ವಾಭಾವಿಕವಲ್ಲ. ಜೀವನು ಸ್ವಾಭಾವಿಕವಾಗಿ ಸುಖಸ್ವರೂಪನು. ಇಂಥಾ ಸುಖಸ್ವರೂಪದ ಜೀವನಿಗೆ ಕರಣಾದಿ ಗಳ ಸಂಪರ್ಕದಿಂದ ದುಃಖಉಂಟಾಯಿತು. ಈ ವಿಷಯದಲ್ಲಿ ಅನುಭವ ಹೇಗೆಂದರೆ—ಜಾಗ್ರತ್ಸ್ವಪ್ನಗಳಲ್ಲಿ ಕರಣಾದಿಗಳ ಸಂಪರ್ಕವಿರೋಣದರಿಂದ ದುಃಖವುಂಟಾಯಿತು. ಸುಷುಪ್ತಿಯಲ್ಲಿ ಕರಣಾದಿಗಳ ಸಂಪರ್ಕವಿಲ್ಲದ್ದರಿಂದ ಜೀವನಿಗೆ ಸ್ವಾಭಾವಿಕವಾದ ಸುಖವೇ ಇತ್ತು. ನಿದ್ರೆಯಿಂದ ಎಚ್ಚತ್ತವನು ಇದು ವರಿಗೂ ನಾನು ಸುಖವಾಗಿ ಮಲಗಿದ್ದೆ, ಏನೂ ತೋರಲಿಲ್ಲವೆಂದು ತನ್ನ ಅನುಭವ ವನ್ನು ಹೇಳುತ್ತಾನೆ. ಆದ್ದರಿಂದ ಜೀವನಿಗೆ ಸುಖವು ಸ್ವಾಭಾವಿಕವಾದ್ದು. ದುಃಖವು ಅಗಂತುಕವಾದ್ದೆಂದೇ ಸಿದ್ಧಾಂತ. ಶಿಷ್ಯ—ಜೀವನಿಗೆ ಈ ದುಃಖ ಏತ ರಿಂದ ಉಂಟಾಯಿತು ? ಗುರು—ಶರೀರವಂ ಹೊಂದಿದ್ದರಿಂದ ಬಂತು. ಶರೀರ ಎಲ್ಲೆಲ್ಲಿದೆಯೋ ಅಲ್ಲೆಲ್ಲಾ ದುಃಖ ತಪ್ಪಿದ್ದಲ್ಲ. ಶಿಷ್ಯ—ಹಾಗಾದರೆ ರಾಜರಿಗೂ ಶರೀರವಿದೆ, ಅವರಿಗೆ ದುಃಖವಿಲ್ಲವಲ್ಲ ? ಗುರು—ಅವರಿಗೂ ಮಹಾ ದುಃಖ ವುಂಟು. ಹೇಗೆಂದರೆ–ದೇಹಕ್ಕೆ ರೋಗ ಬಂದರೂ, ಪತ್ನೀಪುತ್ರಾದಿಗಳು ಸತ್ತರೂ, ರಾಜ್ಯಕ್ಕೆ ಹಾನಿ ಬಂದರೂ, ಶತ್ರುಗಳು ಯುದ್ಧಕ್ಕೆ ಬಂದರೂ ದುಃಖವುಂಟಾಗುತ್ತೆ. ಆದ್ದರಿಂದ ರಾಜರು ಮಹಾದುಃಖಿಗಳು. ರಾಜ್ಯಮೋಹದಿಂದ ದುಃಖವು ಸುಖ ವಾಗಿ ಕಾಣುತ್ತೆ. ಶಿಷ್ಯ—ಮೋಹದಿಂದ ದುಃಖವು ಸುಖವಾಗಿ ಕಾಣುವುದುಂಟೆ? ಗುರು–ಪಲ್ಲಕ್ಕಿಯನ್ನು ಹೊತ್ತು ಜೀವಿಸುವವನಿಗೆ ಪಲ್ಲಕ್ಕಿಹೊರತಕ್ಕದ್ದು ದುಃಖವಾ ದಾಗ್ಯೂ ದ್ರವ್ಯಮೋಹದಿಂದ ಪಲ್ಲಕ್ಕಿ ಹೊರುವ ದುಃಖವು ಸುಖವಾಗಿ ಕಾಣುತ್ತೆ. ಪಲ್ಲಕ್ಕಿ ಹೊರತಕ್ಕದ್ದು ಸಿಕ್ಕೀತೆ ಎಂದು ಹುಡುಕುತ್ತಾರೆ. ಪುತ್ರಮೋಹದಿಂದ ಗರ್ಭಭಾರ ದುಃಖವು ಸ್ತ್ರೀಯರಿಗೆ ಸುಖವಾಗಿ ಕಾಣುತ್ತೆ. ಇದರಂತೆ ರಾಜ್ಯ

ಮೋಹದಿಂದ ದುಃಖವು ರಾಜರಿಗೆ ಸುಖವಾಗಿ ಕಾಣುತ್ತೆ. ಶಿಷ್ಯ—ಆದರೆ ದೇವತೆಗಳಿಗೂ ಶರೀರವಿದೆ; ಅವರಿಗೂ ದುಃಖವುಂಟೆ? ಗುರು—ಉಂಟು. ಹೇಗೆಂದರೆ–ರಾವಣ, ಬಲಿ, ಶೂರಪದ್ಮಾಸುರಾದಿ ರಾಕ್ಷಸರು ಸ್ವರ್ಗವನ್ನಾಕ್ರಮಿಸಿಕೊಂಡು ದೇವತೆಗಳನ್ನೆಲ್ಲಾ ಸೆರೆಹಾಕಿದ್ದರೆಂದು ಅನೇಕ ಗ್ರಂಥಗಳಲ್ಲಿ ಹೇಳಿರುತ್ತೆ. ಮತ್ತು ಈ ಲೋಕದಲ್ಲಿ ಪುಣ್ಯವಂ ಮಾಡಿ ಸ್ವರ್ಗಕ್ಕೆ ಹೋಗಿರತಕ್ಕವರಿಗೂ ದುಃಖವುಂಟು. ಹೇಗೆಂದರೆ—ತನಗಿಂತಲೂ ಹೆಚ್ಚು ಪುಣ್ಯಗಳಂ ಮಾಡಿ ಅಧಿಕ ಪದವಿಯಲ್ಲಿರತಕ್ಕವರಂ ನೋಡಿ ದುಃಖವು. ಪುಣ್ಯ ತೀರಿದನಂತರ ಇಂದ್ರನು ವಜ್ರಾಯುಧದಿಂದ ಆ ದೇಹವನ್ನು ಕತ್ತರಿಸಲು ಸ್ವರ್ಗದಿಂದ ತಲೆಕೆಳಗಾಗಿ ಬೀಳುವ ದುಃಖವವರಿಗುಂಟಾಗುತ್ತೆ. ಆದ್ದರಿಂದ ಎಷ್ಟು ವಿಧವಾಗಿ ನೋಡಿದರೂ ಶರೀರವನ್ನು ಹೊಂದಿದ್ದರಿಂದ ದುಃವುಂಟಾಯಿತೆಂಬುವುದೇ ಸಿದ್ಧಾಂತ. ಶಿಷ್ಯ—ದೇವತೆಗಳಿಗೂ ದುಃಖವಿದ್ದಮೇಲೆ ಅವರು ತಮ್ಮನ್ನು ಪೂಜಿಸುವವರಿಗೆ ಫಲವನ್ನು ಹೇಗೆ ಕೊಟ್ಟಾರು ? ಗುರು—ದುಃಖಿಗಳಾದಾಗ್ಯೂ ಆಶ್ರಿತರಿಗೆ ಧನಾದಿಗಳನ್ನು ಹೇಗೆ ಕೊಡುತ್ತಾರೋ ಹಾಗೆ ದೇವತೆಗಳು ದುಃಖಿಗಳಾದಾಗ್ಯೂ ತಮ್ಮ ಪುಣ್ಯಶಕ್ತಿ ಜನ್ಯಮಾದ ಮಹಿಮೆಯಿಂದ ಭಕ್ತರಿಗೆ ಇಷ್ಟಾರ್ಥ ಕೊಡುತ್ತಾರೆ. ಶಿಷ್ಯ—ಜ್ಞಾನಿಗೂ, ಅಜ್ಞಾನಿಗೂ ಇವರಿಬ್ಬರಿಗೂ ಶರೀರವಿರೋಣದರಿಂದ ಹಸಿವು ತೃಷೆ ಶೀತೋಷ್ಣ ವ್ಯಾಘ್ರ ವೃಶ್ಚಿಕ ಸರ್ಪ ಸಂಸಾರ ತಾಪತ್ರಯಾದಿಗಳಿಂದ ಉಂಟಾದ ದುಃಖವು ಇವರಿಬ್ಬರಿಗೂ ಸಮವೇ ಆಗಿರುವುದು. ಇದರಲ್ಲಿ ಜ್ಞಾನಿಗೂ ಅಜ್ಞಾನಿಗೂ ಭೇದವೇನು ? ಗುರು–ನೀನು ಹೇಳಿದಂತೆ ಸಕಲ ವ್ಯವಹಾರವು ಜ್ಞಾನಿಗೆ ಸಮವಾದರೂ ಇವರಿಬ್ಬರಿಗೂ ಭೇದವುಂಟು. ಹೇಗೆಂದರೆ–ಜ್ಞಾನಿಯ ದುಃಖವು ಅಂತಃಕರಣಕ್ಕೆ ವಿನಹ ಸಚ್ಚಿದಾನಂದ ಸ್ವರೂಪನಾದ ಆತ್ಮನಿಗಲ್ಲ. ಆತ್ಮನಿಗೆ ಅನೃತಜಡದುಃಖಾತ್ಮಕವಾದ ಅಂತಃಕರಣದಿಂದಲೂ ಅದರ ಧರ್ಮವಾದ ದುಃಖಾದಿಗಳಿಂದಲೂ ಸಂಬಂಧವಿಲ್ಲ ಎಂದು ಶ್ರುತಿ ಯುಕ್ತಿ ಅನುಭವಗಳಿಂದ ತಿಳಿದು ಲೋಕವ್ಯವಹಾರಕ್ಕೂ ನನಗೂ ಸಂಬಂಧವಿಲ್ಲವೆಂದು ತೃಪ್ತನಾಗಿರುತ್ತಾನೆ. ಅಜ್ಞಾನಿಯು ಆತ್ಮಸ್ವರೂಪವನ್ನು ಕಾಣದೆ ತಾನು ಸಚ್ಚಿದಾಂದಸ್ವರೂಪನೆಂಬ ಭಾವನೆಯನ್ನು ಬಿಟ್ಟು ಈ ದೇಹವೇ ನಾನು ಎಂದು ತಿಳಿದು ದೇಹ ಮತ್ತು ಅಂತಃಕರಣಗಳಿಗೆ ಹೇಳಿರುವ ಧರ್ಮಗಳನ್ನೆಲ್ಲ ತನ್ನಲ್ಲಿ ಆರೋಪಿಸಿಕ್ಕೊಂಡು ನಾನು ಮನುಷ್ಯನು ಎಂದು ಜಾತಿ ಕರ್ಮ ವರ್ಣಾಶ್ರಮಾಭಿಮಾನಿಯಾಗಿರುತ್ತಾನೆ. ಇದರಿಂದ ದುಃಖಾನುಭವ ಉಂಟಾಗುತ್ತೆ. ಜ್ಞಾನಾಜ್ಞಾನಿಗಳಿಗೆ ಇಷ್ಟು ಭೇದವಿರುತ್ತೆ.

ಮತ್ತು ಸಂಸಾರವ್ಯವಹಾರದಲ್ಲೂ ಜ್ಞಾನಾಜ್ಞಾನಿಗಳಿಗೆ ಭೇದವಿಲ್ಲ. ಜ್ಞಾನಿಯು ಸಕಲಸಂಸಾರ ವ್ಯವಹಾರವು ಸ್ವಪ್ನದಂತೆ ಮಿಥ್ಯಾಭೂತವಾದ್ದು ಎಂದು ತಿಳಿದು ಕೃತಕೃತ್ಯನಾಗುತ್ತಾನೆ. ಅಜ್ಞಾನಿಯು ಇದೆಲ್ಲಾ ಸತ್ಯ, ಇದರಿಂದ ಬಂಧನ ನನಗುಂಟೆಂದು ತಿಳಿದು ಜನ್ಮ ಮರಣ ದುಃಖವನ್ನೇ ಹೊಂದುತ್ತಾನೆ. ಇವರಿಬ್ಬರಿಗೆ ಇದೇ ಭೇದ. ಶಿಷ್ಯ—ದುಃಖಜನಕವಾದ ಈ ಶರೀರವು ಏತರಿಂದ ಆತ್ಮನಿಗೆ ಬಂತು? ಗುರು–ಕರ್ಮದಿಂದ. ಶಿಷ್ಯ–ಆ ಕರ್ಮವೆಷ್ಟುವಿಧ ? ಗುರು—ಮೂರುವಿಧ. ಶಿಷ್ಯ–ಈ ಮೂರು ವಿಧ ಕರ್ಮಗಳ ಸ್ವರೂಪವನ್ನು ವಿಶದವಾಗಿ ಹೇಳಬೇಕು. ಗುರು—ಪುಣ್ಯಕರ್ಮ, ಪಾಪಕರ್ಮ, ಪುಣ್ಯಪಾಪ ಮಿಶ್ರಕರ್ಮ ಎಂದು ಮೂರು ವಿಧ. ಇವುಗಳಲ್ಲಿ ಪ್ರತಿಯೊಂದು ಕರ್ಮವು ಉತ್ಕೃಷ್ಟ, ಮಧ್ಯಮ, ಸಾಮಾನ್ಯ ಈ ಭೇದದಿಂದ ಮೂರುಮೂರು ವಿಧವಾಗಿದೆ. ಇದರಲ್ಲಿ ಉತ್ಕೃಷ್ಟ ಅಂದರೆ ಹೆಚ್ಚಾದ್ದು, ಮಧ್ಯಮ ಅಂದರೆ ಹೆಚ್ಚು ಕಡಿಮೆಯಿಲ್ಲದೆ ಇರುವುದು, ಸಾಮಾನ್ಯ ಅಂದರೆ ಕಡಮೆಯಾದ್ದು ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ ಪುಣ್ಯೋತ್ಕರ್ಷ, ಪುಣ್ಯಮಧ್ಯಮ, ಪುಣ್ಯಸಾಮಾನ್ಯ ಎಂದು ಪುಣ್ಯಕರ್ಮವು ಮೂರು ವಿಧ. ಪಾಪೋತ್ಕರ್ಷ, ಪಾಪ ಮಧ್ಯಮ,ಪಾಪಸಾಮಾನ್ಯವೆಂದು ಪಾಪಕರ್ಮಗಳು ಮೂರು ವಿಧ. ಮಿಶ್ರೋತ್ಕರ್ಷ, ಮಿಶ್ರವೇಧ್ಯಮ, ಮಿಶ್ರಸಾಮಾನ್ಯ ಎಂದು ಮಿಶ್ರಕರ್ಮಗಳು ಮೂರು ವಿಧ. ಶಿಷ್ಯ–ಇವುಗಳಲ್ಲಿ ಯಾವಯಾವ ಕರ್ಮಗಳಿಂದ ಯಾವಯಾವ ಶರೀರ ಬರುತ್ತೆ ? ಗುರು–ಪುಣ್ಯೋತ್ಕರ್ಷಕರ್ಮದಿಂದ ಹಿರಣ್ಯಗರ್ಭಾದಿ ಶರೀರಪ್ರಾಪ್ತಿ. ಪುಣ್ಯಮಧ್ಯಮ ಕರ್ಮದಿಂದ ಇಂದ್ರಾದಿ ಶರೀರಪ್ರಾಪ್ತಿ. ಪುಣ್ಯಸಾಮಾನ್ಯಕರ್ಮದಿಂದ ಯಕ್ಷಗಂಧರ್ವ ಶರೀರಪ್ರಾಪ್ತಿ. ಪಾಪೋತ್ಕರ್ಷಕರ್ಮದಿಂದ ಪರರಿಗೆ ಸಂತಾಪವನ್ನುಂಟುಮಾಡುವ ಮುಂಡುಗಳ್ಳಿ, ಈಚಲು, ವಿಷವೃಕ್ಷ, ಚೇಳು, ಸರ್ಪ ಕ್ರಿಮಿವ್ಯಾಘ್ರಾದಿ ಶರೀರ ಪ್ರಾಪ್ತಿ. ಪಾಪಮಧ್ಯಮಕರ್ಮದಿಂದ ಹಲಸು ಮಾವು ತೆಂಗು ಬಾಳೆ ಕತ್ತೆ ಹಂದಿ ಕುರಿ ವಂಟೆ ಮೊದಲಾದ ಶರೀರಪ್ರಾಪ್ತಿ. ಪಾಪ ಸಾಮಾನ್ಯಕರ್ಮದಿಂದ ತುಲಸೀ ಬಿಲ್ವ ಅಶ್ವತ್ಥ ಗೋವು ಗಜ ಅಶ್ವಾದಿಗಳ ಶರೀರಪ್ರಾಪ್ತಿ. ಮಿಶ್ರೋತ್ಕರ್ಷಕರ್ಮ ದಿಂದ ಬ್ರಾಹ್ಮಣಶರೀರಪ್ರಾಪ್ತಿ. ಮಿಶ್ರಮಧ್ಯಮಕರ್ಮದಿಂದ ವೈಶ್ಯ ಶೂದ್ರಾದಿ ಶರೀರಪ್ರಾಪ್ತಿ. ಮಿಶ್ರಸಾಮಾನ್ಯ ಕರ್ಮದಿಂದ ಚಂಡಾಲಾದಿ ಶರೀರಪ್ರಾಪ್ತಿ. ಪೂರ್ವೋಕ್ತ ಮಿಶ್ರಕರ್ಮವು ಪರಸಂಪಾಧಿಕ್ಯದಿಂದ ಕೂಡಿದ್ದರೆ ಸ್ತ್ರೀಶರೀರವು. ಪರಸಂತೋಷಾಧಿಕ್ಯದಿಂದ ಕೂಡಿದ್ದರೆ ಪುರುಷದೇಹವು ಬರುತ್ತೆಂದು ತಿಳಿಯತಕ್ಕದ್ದು. ಶಿಷ್ಯ—ಈ ಮೂರು ವಿಧವಾದ ಕರ್ಮಗಳು ಏತರಿಂದ ಮಾಡಲ್ಪಡುತ್ತೆ? ಗುರು—ಮನಸ್ಸು,

ವಾಕ್ಕು, ಶರೀರ ಈ ಮೂರು ಕಾರಣಗಳಿಂದ. ಶಿಷ್ಯ—ಲೋಕದಲ್ಲಿ ನಾಮಾಡಿದೆ, ನಾನು ಮಾಡುತ್ತೇನೆ ಎಂಬುದಾಗಿ ಕರ್ತೃತ್ವವು. ನಾನು ಎಂಬ ಶಬ್ದಕ್ಕೆ ವಾಚ್ಯನಾದ ಜೀವನಲ್ಲಿ ತೋರುತ್ತಿರಲು ಅದನ್ನು ಬಿಟ್ಟು ತ್ರಿವಿಕರಣಗಳು ಕರ್ಮಮಾಡುತ್ತೆಂದು ಹೇಗೆ ಹೇಳಬಹುದು? ಗುರು–ಆತ್ಮನು ನಿರ್ವಿಕಾರಿಯಾದ್ದರಿಂದ ಆತ್ಮನಲ್ಲಿ ಕರ್ತೃತ್ವವಿಲ್ಲ. ಅಜ್ಞಾನದಿಂದ ಕರಣಗಳಲ್ಲಿರುವ ಕರ್ತೃತ್ವವು ಆತ್ಮನಲ್ಲಿ ಅಧ್ಯಾಸವಾಗಿದೆ. ಈಅಧ್ಯಾಸದಿಂದ ನಾಮಾಡಿದೆನೆಂಬ ವ್ಯವಹಾರ ಉಂಟಾಯಿತು. ಶಿಷ್ಯ—ಅಧ್ಯಾಸವೆಂದರೇನು? ಗುರು–ಒಬ್ಬನಲ್ಲಿರುವ ಧರ್ಮ ಮತ್ತೊಬ್ಬನಲ್ಲಿ ತೋರುವುದೇ ಅಧ್ಯಾಸವು. ಶಿಷ್ಯ—ಒಬ್ಬನ ಧರ್ಮವು ಮತ್ತೊಬ್ಬನಲ್ಲಿ ತೋರುವುದುಂಟೇ ? ಗುರು—ತೋರುತ್ತೆ, ಹೇಗೆಂದರೆ—ಹಡಗಿನ ಮೇಲೆ ಕೂತುಕೊಂಡು ಹೋಗುವವನ ಕಣ್ಣಿಗೆ ಹಡಗಿನಲ್ಲಿರುವ ವೇಗವು ಅಲ್ಲಾಡದ ದಡದಲ್ಲಿರುವ ಮರಗಳಲ್ಲಿ ಅಧ್ಯಾಸವಾಗಿ ಮರಗಳು ಓಡುವಂತೆ ತೋರುತ್ತೆ. ಮೇಘಗಳು ಓಡುತ್ತಿದ್ದರೆ ಮೇಘನಿಷ್ಠವೇಗವು ಚಂದ್ರನಲ್ಲಿ ತೋರಿ ಚಂದ್ರ ಓಡಿದಂತೆ ಕಾಣುತ್ತಾನೆ. ಇದರಂತೆ ತ್ರಿವಿಧಕರಣಗಳಲ್ಲಿರುವ ಕರ್ತೃತ್ವವು ಸ್ವಸ್ವರೂಪಜ್ಞಾನ ಶೂನ್ಯರಾದವರಿಗೆ ಅಜ್ಞಾನದಿಂದ ಆತ್ಮನಲ್ಲಿ ಅಧ್ಯಾಸವಾಗಿ ನಾಮಾಡಿದೆ, ನಾಮಾಡುತ್ತೇನೆಂದು ಭಾವಿಸಿ ಆಯಾಯ ಪುಣ್ಯಪಾಪಗಳನ್ನು ಅನುಭವಿಸುತ್ತಾರೆ. ಶಿಷ್ಯ—ಆತ್ಮನಿಗೆ ಕರ್ತೃತ್ವವಿಲ್ಲದಿದ್ದಾಗ್ಯೂ ಕರಣಗಳು ಮಾಡುವ ಕರ್ಮವನ್ನು ತನ್ನಲ್ಲಿ ಆರೋಪಣೆ ಮಾಡಿಕೊಂಡದ್ದರಿಂದ ಆ ಕರ್ಮಫಲವು ಆತ್ಮನಿಗೆ ಬರುವುದುಂಟೆ ? ಗುರು—ಬರುತ್ತೆ. ಹೇಗೆಂದರೆ;— ಪುತ್ರನು ಜ್ವರದಿಂದ ಸಂಕಟಪಡುತ್ತಿದ್ದರೆ ಮಾತಾಪಿತೃಗಳು ತಮಗೆ ಜ್ವರ ತಾಪವಿಲ್ಲದಿದ್ದಾಗ್ಯೂ ಮಹಾ ಸಂಕಟಪಡುತ್ತಾರೆ. ಈ ಸಂಕಟವು ಪುತ್ರನಲ್ಲಿನ ಅಭಿಮಾನದಿಂದುಂಟಾಯಿತು. ಗೋವಧೆ ಮಾಡಿರುವ ಮನುಷ್ಯನಂ ಕುರಿತು, ಗೋವಧೆ ಮಾಡದ ಮನುಷ್ಯನು, ಇವನು ಗೋವಧೆ ಮಾಡಿದನೆಂದು ಆಡಿದರೆ ಗೋವಧಾಕರ್ಮದಲ್ಲಿ ತಾನು ಅಕರ್ತೃವಾದಾಗ್ಯೂ ಆ ಪಾಪವು ಇವನಿಗೆ ಬರುತ್ತೆ. ಈ ವಿಷಯದಲ್ಲಿ (ಮಾಡಿದವರ ಪಾಪ ಆಡಿದವರಿಗೆ) ಎಂಬ ಲೋಕನ್ಯಾಯ ಉಂಟು. ದೇವದತ್ತನೆಂಬುವನು ರಾತ್ರಿಯಲ್ಲಿ ಒಬ್ಬ ಮನುಷ್ಯನನ್ನು ಸಂಹರಿಸಿ ಕಣ್ಣಿಗೆ ಕಾಣಿಸದಂತೆ ತಪ್ಪಿಸಿಕೊಂಡು ಹೋದನು. ರಾಜಭಟರು ಈ ಸಂಹಾರಕರ್ಮವನ್ನು ಮಾಡಿದವರ್‍ಯಾರೆಂದು ವಿಚಾರಿಸುವಲ್ಲಿ ವಿಷ್ಣುದತ್ತನೆಂಬುವನು ನಾನು ಮಾಡಿದೆನೆಂದು ಹೇಳಲು, ವಿಷ್ಣುದತ್ತನಿಗೆ ಶಿಕ್ಷೆಯುಂಟಾಗುತ್ತೆ. ಇಲ್ಲಿ ಹೇಳಿದ ಸಂಹಾರಕರ್ಮದಲ್ಲಿ ದೇವದತ್ತನು ಕರ್ತೃವು;

ವಿಷ್ಣುದತ್ತನು ಅಕರ್ತೃವು. ಕರ್ತೃವಾದ ದೇವದತ್ತನ ಕರ್ಮವನ್ನು ಅಕರ್ತೃವಾದ ವಿಷ್ಣುದತ್ತನು ತನ್ನಲ್ಲಿ ಆರೋಪಿಸಿಕೊಂಡದ್ದರಿಂದ ಬಂಧನವುಂಟಾಯಿತು. ಇದರಂತೆ ತ್ರಿವಿಧಕರಣಗಳಲ್ಲಿರುವ ಕರ್ತೃತ್ವವನ್ನು ಅಕರ್ತೃವಾದ ಆತ್ಮನು ತನ್ನಲ್ಲಿ ಆರೋಪಿಸಿಕೊಂಡದ್ದಕ್ಕಾಗಿ ಬಂಧನವುಂಟಾಯಿತು. ಶಿಷ್ಯ—ತ್ರಿವಿಧಕರಣಗಳಿಂದ ಕರ್ಮ ಮಾಡಲ್ಪಡುತ್ತೆಂದು ಹೇಳಿದ್ದು ಸರಿಯಷ್ಟೆ? ಯಾವಯಾವ ಕರಣದಿಂದ ಯಾವಯಾವ ಕರ್ಮ ಮಾಡಲ್ಪಡುತ್ತೋ ಅದನ್ನು ವಿಸ್ತಾರವಾಗಿ ಹೇಳಬೇಕು. ಗುರು—ಮಾನಸಪೂಜಾ, ಧ್ಯಾನ, ಪರಲೋಕಚಿಂತಾ, ಆತ್ಮಚಿಂತೆ, ಭಕ್ತಿ, ಪರೋಪಕಾರಚಿಂತಾ, ವೈರಾಗ್ಯ ಇತ್ಯಾದಿಗಳು ಮನಸ್ಸಿನಿಂದ ಮಾಡಲ್ಪಟ್ಟ ಪುಣ್ಯಕರ್ಮಗಳು. ಪರರಿಗೆ ಅಪಕಾರಮಾಡುವ ಯೋಚನೆ, ವೇದಶಾಸ್ತ್ರಗಳಲ್ಲಿ ಅಪ್ರಾಮಾಣ್ಯಭಾವನ, ಪರಶ್ರೇಯಸ್ಸಿಗೆ ಹಾನಿಯನ್ನು ಯೋಚಿಸುವುದು ಇತ್ಯಾದಿಗಳು ಮನಸ್ಸಿನಿಂದ ಮಾಡಿದ ಪಾಪಕರ್ಮಗಳು. ಮಾನಸಾಪೂಜಾ ದೇವತಾಧ್ಯಾನಗಳಲ್ಲಿ ಮನಸ್ಸು ಚಂಚಲವಾಗಿ ಸಂಸಾರದಲ್ಲಿ ವ್ಯಾಪಿಸಿದರೆ ಅದು ಮನಸ್ಸಿನಿಂದ ಮಾಡಲ್ಪಟ್ಟ ಮಿಶ್ರಕರ್ಮವು. ಸತ್ಯವಾಕ್ಯ, ಸಹಸ್ರನಾಮಪಠನ, ಪಂಚಾಕ್ಷರೀಜಪ, ಸ್ತೋತ್ರಾದಿಗಳು ವಾಕ್ಕಿನಿಂದ ಮಾಡಿದ ಪುಣ್ಯಕರ್ಮ. ಪರದೂಷಣಾದಿಗಳು ವಾಕ್ಕಿನ ಪಾಪಕರ್ಮ. ಜಪಾದಿಗಳನ್ನು ಮಾಡುವ ಕಾಲದಲ್ಲಿ ಮಧ್ಯೆ ಇತರ ಲೌಕಿಕ ಮಾತುಗಳನ್ನಾಡುವುದು ವಾಕ್ಕಿನ ಮಿಶ್ರಕರ್ಮಗಳು. ತೀರ್ಥಸ್ನಾನ, ದೇವಯಾತ್ರಾ, ಪ್ರದಕ್ಷಿಣ, ಸಜ್ಜನ ದರ್ಶನ, ಸತ್ಕಥಾಶ್ರವಣ ಇತ್ಯಾದಿಗಳು ಶರೀರದಿಂದ ಮಾಡಲ್ಪಟ್ಟ ಪುಣ್ಯಕರ್ಮಗಳು. ಕಳ್ಳತನ,ಪರಹಿಂಸಾದಿಗಳು, ಪರಸ್ತ್ರೀಗಮನಾದಿಗಳು ಶರೀರದ ಪಾಪಕರ್ಮಗಳು. ಪರದ್ರವ್ಯವನ್ನು ಅಪಹರಿಸಿ ಛತ್ರವಿಡುವುದು, ಯಾಚನೆ ಮಾಡಿ ಸಂತರ್ಪಣೆ ಮಾಡುವುದು, ಬಿಟ್ಟಿ ಆಳುಗಳಿಂದ ಕೊಳ ಕಟ್ಟಿಸುವುದು ಇತ್ಯಾದಿಗಳು ಶರೀರದ ಮಿಶ್ರಕರ್ಮಗಳೆಂದು ತಿಳಿಯಬೇಕು. ಶಿಷ್ಯ—ಈ ವಿಧ ಕರ್ಮಗಳನ್ನು ತಿಳಿದಿದ್ದರಿಂದ ಫಲವೇನು? ಗುರು—ಸಕಲ ಕರ್ಮಗಳನ್ನು ತ್ರಿವಿಧಕರಣಗಳು ಮಾಡುವವೇ ವಿನಹ ಅಕರ್ತೃವಾಗಿಯೂ ನಿಸ್ಸಂಗನಾಗಿಯೂ ಇರುವ ನನಗೆ ಇದರ ಸಂಪರ್ಕವಿಲ್ಲವೆಂಬ ಜ್ಞಾನವುಂಟಾಗುವುದೇ ಫಲ. ಶಿಷ್ಯ—ಕರ್ಮವನ್ನು ತ್ರಿವಿಧಕರಣಗಳು ತಾವೇ ಮಾಡುತ್ತವೋ ಮತ್ತೊಂದರಿಂದ ಪ್ರೇರಿಸಲ್ಪಟ್ಟು ಮಾಡುತ್ತವೋ? ಗುರು—ರಾಗದ್ವೇಷಾದಿಗಳಿಂದ ಪ್ರೇರಿಸಲ್ಪಟ್ಟು ಮಾಡುತ್ತವೆ. ಶಿಷ್ಯ—ಲೋಕದಲ್ಲಿ ನಾನು ಗುಡಿಯನ್ನು ಕಟ್ಟಿಸಿದೆ, ನಾನು ಸಂತರ್ಪಣೆ ಮಾಡಿಸಿದೆ ಎಂಬದಾಗಿ ಕಾರಯಿತೃತ್ವವು ಆತ್ಮನಲ್ಲಿ ತೋರು

ತ್ತಿರಲಾಗಿ ರಾಗದ್ವೇಷಾದಿಗಳಿಗೂ ಕಾರಯಿತೃತ್ವವನ್ನು ಹೇಗೆ ಹೇಳುತ್ತೀರಿ ? ಇಲ್ಲಿ ಕರ್ತೃತ್ವ ಕಾರ್ಯಯಿತೃತ್ವವೆಂದು ಎರಡು. ನಾಮಾಡಿದೆ, ನಾನು ಕೊಟ್ಟೆ, ನಾನು ಮಾಡುತ್ತೇನೆ ಎಂಬುವುದೇ ಕರ್ತೃತ್ವ. ನಾನು ಮಾಡಿಸಿದೆ ನಾನು ಕೊಡಿಸಿದೆ ಎಂಬುವುದೇ ಕಾರಯಿತೃತ್ವ. ಮೇಲೆ ಹೇಳಿದ ವಿಷಯದಲ್ಲಿ ಕರ್ಮವನ್ನು ತ್ರಿವಿಧ ಕರಣಗಳು ಮಾಡುತ್ತೆ, ರಾಗದ್ವೇಷಾದಿಗಳು ಮಾಡಿರುತ್ತೆ ಎಂದಾಯಿತು. ಇಲ್ಲಿ ಕರ್ತೃತ್ವವು ತ್ರಿವಿಧಕರಣಗಳಿಗೂ, ಕಾರಯಿತೃತ್ವವು ರಾಗದ್ವೇಷಾದಿಗಳಿಗೂ ಹೇಳಲ್ಪಟ್ಟಿತು. ಇದರಮೇಲಿನ ಆಕ್ಷೇಪವೇನಂದರೆ—ಕಾರಯಿತೃತ್ವವು ನಾನು ಮಾಡಿಸಿದೆಯೆಂಬುದಾಗಿ ಆತ್ಮನಲ್ಲಿ ತೋರುತ್ತಿರಲಾಗಿ ರಾಗದ್ವೇಷಾದಿಗಳಿಗೆ ಹೇಳಿದ್ದು ಸರಿಯಲ್ಲ ಎಂಬುವುದು ಇದಕ್ಕೆ ಸಮಾಧಾನ. ಗುರು—ಆತ್ಮನು ನಿರ್ವಿಕಾರಿ, ಅಜ್ಞಾನದಿಂದ ರಾಗದ್ವೇಷಾದಿಗಳಲ್ಲಿರುವ ಕಾರಯಿತೃತ್ವ ತನ್ನಲ್ಲಿ ತೋರುತ್ತೆ. ಹಿಂದೆ ಕರ್ತೃತ್ವ ವಿಷಯದಲ್ಲಿ ಹೇಳಿದ ಸಮಾಧಾನಗಳನ್ನೆಲ್ಲಾ ಇಲ್ಲೂ ಉಪಯೋಗಿಸಿಕೊಂಡರೆ ಇದಕ್ಕೆ ಸಮಾಧಾನ ಉಂಟಾಗುತ್ತೆ. ಶಿಷ್ಯ—ಲೋಕದಲ್ಲಿ ಕರ್ತೃತ್ವ ಕಾರಯಿತೃತ್ವವೆರಡು ಚೇತನಕ್ಕೆ ಉಂಟಾಗುವುದೇ ವಿನಹ ಅಚೇತನವಾದ ಜಡಪದಾರ್ಥದಲ್ಲಿ ತೋರುವುದಿಲ್ಲ. ಹಾಗೆ ಜಡಪದಾರ್ಥಗಳಿಗೆ ಕಾರಯಿತೃತ್ವ ಉಂಟೆಂದೊಡೆ ಮಡಿಕೆಯು ಮತ್ತೊಂದು ಮಡಿಕೆಗೆ ಪ್ರೇರಿಸಿ ನೀರು ತರಿಸಲಿ. ಕೊಡಲಿಯು ಮತ್ತೊಂದು ಕೊಡಲಿಯನ್ನು ಪ್ರೇರಿಸಿ ಸೌದೆಗಳನ್ನು ಹೊಡೆಸಲಿ. ಇದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲವಾಗಿ ಜಡವಾದ ರಾಗದ್ವೇಷಾದಿಗಳಿಗೆ ಕಾರಯಿತೃತ್ವವನ್ನು ಹೇಳಕೂಡದು. ಚೇತನನಾದ ಜೀವಾತ್ಮನಿಗೆ ಹೇಳಬೇಕು. ಗುರು—ನೀನು ಮಾಡಿದ ಆಕ್ಷೇಪ ಸರಿಯಾದ್ದಲ್ಲ. ಮಡಿಕೆಯು ಮಡಿಕೆಯಿಂದ ನೀರು ತರಿಸುವ ವಿಷಯದಲ್ಲೂ, ಕೊಡಲಿಯು ಕೊಡಲಿಯಿಂದ ಸೌದೆಗಳನ್ನು ಹೊಡೆಸುವ ವಿಷಯದಲ್ಲೂ, ಮಡಿಕೆ ಕೊಡಲಿಗಳಲ್ಲಿ ಯೋಗ್ಯತೆಯಿಲ್ಲ. ಜಡಪದಾರ್ಥಗಳಾದಾಗ್ಯೂ ಎಲ್ಲಿ ಯೋಗ್ಯತೆ ಇರುತ್ತೋ ಅಲ್ಲಿ ಕರ್ತೃತ್ವ ಕಾರಯಿತೃತ್ವಗಳುಂಟಾಗುತ್ತೆ, ಎಲ್ಲಿ ಯೋಗ್ಯತೆ ಇಲ್ಲವೊ ಅಲ್ಲಿ ಕರ್ತೃತ್ವ ಕಾರಯಿತೃತ್ವಗಳುಂಟಾಗುವುದಿಲ್ಲ. ಕನ್ನಡಿಯು, ಮಡಿಕೆಯ ಓಡು ಇವೆರಡೂ ಜಡಗಳೇ ಆದರು ಕನ್ನಡಿಗೆ ಬಿಂಬವನ್ನು ಗ್ರಹಿಸುವ ಯೋಗ್ಯತೆ ಇದೆ. ಮಡಿಕೆಓಡಿಗಿಲ್ಲ. ಔಷಧ ಸಗಣಿ ಇವೆರಡು ಜಡವೇ. ಔಷಧಕ್ಕೆ ರೋಗನಾಶಮಾಡುವ ಯೋಗ್ಯತೆ ಇದೆ ; ಸಗಣಿಯಲ್ಲಿಲ್ಲ. ಇದರಂತೆ ಯೋಗ್ಯತೆ ಎಲ್ಲಿರುವುದೋ ಅದು ಜಡವಾದರೂ ಅದರಲ್ಲಿ ಕರ್ತೃತ್ವಾದಿಗಳುಂಟಾಗುತ್ತೆ. ಯೋಗ್ಯತೆ ಇಲ್ಲದ ಸ್ಥಳದಲ್ಲಿ

ಕರ್ತೃತ್ವಾದಿಗಳು ಸಂಭವಿಸುವುದಿಲ್ಲ. ನದೀಪ್ರವಾಹವು ಜಡವಾದಾಗ್ಯೂ ಯೋಗ್ಯತೆ ಇರುವುದರಿಂದ ದಡದಲ್ಲಿರುವ ಮರಗಳನ್ನು ಕೊಚ್ಚಿಹಾಕುವದೆಂಬ ಕರ್ಮದಲ್ಲಿ ಕರ್ತೃತ್ವವುಂಟಾಯಿತು. ವಾಯುವು ಜಡವಾದಾಗ್ಯೂ ಯೋಗ್ಯತೆ ಇರೋಣದರಿಂದ ಮರಗಳನ್ನು ಮುರಿಯುವುದೆಂಬ ಕರ್ಮದಲ್ಲಿ ಕರ್ತೃತ್ವ ಉಂಟಾಯಿತು. ಅಗ್ನಿಯು ಜಡವು ; ಮದ್ದೂ ಜಡವು ; ಫಿರಂಗಿ ಗುಂಡೂ ಜಡವು. ಜಡವಾದಗ್ನಿಯು ಜಡವಾದ ಮದ್ದಿನೊಡನೆ ಕೂಡಿದ ಫಿರಂಗಿ ಗುಂಡಿನಿಂದ ಸೈನ್ಯವನ್ನು ಸಂಹರಿಸುವಿಕೆ ಎಂಬ ಕರ್ಮವನ್ನು ಮಾಡಿಸುತ್ತದೆ. ಇಲ್ಲಿ ಕಾರಯಿತೃತ್ವ ಅಗ್ನಿಗೂ, ಕರ್ತೃತ್ವ ಮದ್ದಿನೊಡನೆ ಕೂಡಿದ ಫಿರಂಗಿ ಗುಂಡಿಗೂ ಉಂಟಾಯಿತು. ಇದರಂತೆ ರಾಗದ್ವೇಷಾದಿಗಳಿಗೆ ಯೋಗ್ಯತೆ ಇರುವುದರಿಂದ ಜನಗಳಾದರೂ ಕಾರಯಿತೃತ್ವವಿರುತ್ತೆಂದು ತಿಳಿಯಬೇಕು. ಶಿಷ್ಯ—ಈ ರಾಗದ್ವೇಷಾದಿಗಳು ಏತರಿಂದ ಉಂಟಾಯಿತು ? ಗುರು—ಅಭಿಮಾನದಿಂದ. ಶಿಷ್ಯ—ಅದು ಹೇಗೆ ? ಗುರು—ಹೆಂಗಸಿಗೆ ನಾನು ಸ್ತ್ರೀಯೆಂಬ ಅಭಿಮಾನ ಯಾವಾಗ್ಗೆ ಉಂಟಾಗುತ್ತೋ ಆವಾಗ ಅನುರಾಗಾದಿಗಳುಂಟಾಗಿ ಶೀರೆ ಉಟ್ಟುಕೊಳ್ಳುವುದು ಬಳೆ ತೊಟ್ಟುಕೊಳುವುದು, ಕುಪ್ಪಸ ತೊಟ್ಟುಕೊಳ್ಳುವುದು ಮುಂತಾದ ಕರ್ಮದಲ್ಲಿ ಕರಣಗಳಿಗೆ ಪ್ರವೃತ್ತಿಯುಂಟಾಗುತ್ತೆ. ಮನುಷ್ಯನಿಗೆ ನಾನು ಬ್ರಾಹ್ಮಣನೆಂಬ ಅಭಿಮಾನ ಯಾವಾಗ್ಯೆ ಉಂಟಾಗುತ್ತೋ ಆವಾಗ ಅನುರಾಗಪೂರ್ವಕ ಸ್ನಾನ ಸಂಧ್ಯಾ ಭಸ್ಮಧಾರಣ ಮೊದಲಾದ ಕರ್ಮದಲ್ಲಿ ಪ್ರವೃರ್ತಿ ಉಂಟಾಗುತ್ತೆ. ಇದರಂತೆ ಲೋಕದಲ್ಲಿ ಯಾರ್‍ಯಾರಿಗೆ ಯಾವ ವಿಷಯವಾದ ಅಭಿಮಾನ ಉಂಟಾಗುತ್ತೋ ಆಗ ರಾಗಪೂರ್ವಕವಾಗಿ ಆಯಾಯ ಕರ್ಮದಲ್ಲಿ ಪ್ರವೃತ್ತಿ ಉಂಟಾಗುತ್ತೆ. ಆದ್ದರಿಂದ ರಾಗದ್ವೇಷಾದಿಗಳು ಉಂಟಾಗುವುದಕ್ಕೆ ಅಭಿಮಾನವೇ ಕಾರಣ. ಶಿಷ್ಯ—ಈ ಅಭಿಮಾನ ಯಾತರಿಂದ ಬಂತು ? ಗುರು—ಅವಿವೇಕದಿಂದ ಉಂಟಾಯಿತು. ಹೇಗೆಂದರೆ–ಜೀವನಿಗೆ ಜಾತಿ ಕುಲ ವರ್ಣಾಶ್ರಮಗಳು ಯಾವುದೂ ಇಲ್ಲ. ಇಂಥಾದ್ದರಲ್ಲಿ ನಾನು ಬ್ರಾಹ್ಮಣ, ನಾನು ಕ್ಷತ್ರಿಯ, ನಾನು ಶೂದ್ರ, ನಾನು ಸನ್ಯಾಸಿ ಎಂಬ ಅಭಿಮಾನ ವಿವೇಕವಿಲ್ಲದ್ದರಿಂದ ಉಂಟಾಗುತ್ತೆ. ಎಲೈ ಶಿಷ್ಯನೇ ! ಈ ವಿಷಯವನ್ನು ಸ್ವಕಪೋಲಕಲ್ಪಿತವೆಂದು ತಿಳಿಯಬೇಡ. ವಾಸುದೇವಯತೀಂದ್ರ ಪ್ರಮುಖ ಮಹಾತ್ಮರಿಂದ ಮಾಡಲ್ಪಟ್ಟ ಅನೇಕ ಸಂಸ್ಕೃತ ಗ್ರಂಥಗಳಲ್ಲಿ ಹೇಳಿದೆ. ಆದ್ದರಿಂದ ಅವಿವೇಕದಿಂದ ಅಭಿಮಾನವುಂಟಾಯಿತು. ಶಿಷ್ಯ—ಈ ಅಭಿಮಾನವು ಅವಿವೇಕದಿಂದ ಉಂಟಾಯಿತೆಂದು ಏತಕ್ಕೆ ಹೇಳಬೇಕು ? ಶರೀರವನ್ನು ಅವ

ಲಂಬಿಸಿಕೊಂಡು ಉಂಟಾಯಿತೆಂದು ಏತಕ್ಕೆ ಹೇಳಕೂಡದು ? ಗುರು—ಲೋಕ ದಲ್ಲಿ ಶೂದ್ರಾದಿಗಳಿಗೆಲ್ಲಾ ಶರೀರವಿದೆ. ಅವರಿಗೂ ನಾನು ಬ್ರಾಹ್ಮಣನೆಂಬ ಅಭಿಮಾನ ಉಂಟಾಗಬೇಕಾಯಿತು. ಆರೀತಿ ಉಂಟಾಗದ ಕಾರಣ ಶರೀರವನ್ನು ಅವಲಂಬಿಸಿಕೊಂಡು ಅಭಿಮಾನ ಉಂಟಾಗುವುದಿಲ್ಲ. ಶಿಷ್ಯ-ಶಿಖಾ ಯಜ್ಞೋಪ ವೀತಗಳನ್ನವಲಂಬಿಸಿಕೊಂಡು ಅಭಿಮಾನ ಉಂಟಾಗುತ್ತೆಂದು ಏತಕ್ಕೆ ಹೇಳ ಬಾರದು? ಗುರು—ಕ್ಷತ್ರಿಯ ವೈಶ್ಯಾದಿಗಳಿಗೂ ಯಜ್ಞೋಪವೀತವಿರೋಣದ ರಿಂದ ಅವರಿಗೂ ನಾನು ಬ್ರಾಹ್ಮಣನೆಂಬ ಅಭಿಮಾನ ಉಂಟಾಗಬೇಕಾಗುತ್ತಾಗಿ ಶಿಖಾ ಯಜ್ಞೋಪವೀತಗಳನ್ನವಲಂಸಿಕೊಂಡು ಅಭಿಮಾನ ಉಂಟಾಗುತ್ತೆಂದು ಹೇಳಕೂಡದು. ಅವಿವೇಕದಿಂದಲೇ ಉಂಟಾಗುವುದು. ಶಿಷ್ಯ—ಅವಿವೇಕ ಏತರಿಂದ ಉಂಟಾಯಿತು. ಗುರು—ತನ್ನ ಸ್ವರೂಪವನ್ನು ತಿಳಿಯದ ಅಜ್ಞಾನ ದಿಂದ ಅವಿವೇಕ ಉಂಟಾಯಿತು. ಈ ಅಜ್ಞಾನವು ಅನಾದ್ಯ ನಿರ್ವಚನೀಯ ಮಾಯಾಸ್ವರೂಪವಾಗಿರೋಣದರಿಂದ ಉಂಟಾಗತಕ್ಕದ್ದಲ್ಲ. ಶಿಷ್ಯ—ಈ ಬ್ರಾಹ್ಮ ಣತ್ವಾದಿಗಳು ಹೇಗೆ ಉಂಟಾಯಿತು ? ಗುರು—ಉದಯಾಸ್ತಮಯಗಳಿಂದ ವ್ಯತ್ಯಾಸವಾಗದೆ ನಿರ್ವಿಕಾರವಾಗಿ ಒಂದೇ ಆದ ಕಾಲದಲ್ಲಿ, ಇಲ್ಲದೇ ಇರುವ ತಿಥಿ ವಾರ ಪಕ್ಷ ಮಾಶ ಋತು ವರ್ಷ ಯುಗ ಕಲ್ಪ ಪ್ರಳಯಗಳೆಂಬ ವ್ಯವಹಾರವು ಲೋಕವ್ಯವಹಾರಕ್ಕೋಸ್ಕರ ಹೇಗೆ ಕಲ್ಪಿತವಾಯಿತೋ, ಯಾವ ಭೇದವೂ ಇಲ್ಲದ ಜಲದಲ್ಲಿ ಗಂಗೆ ಯಮುನೆ ಕಾವೇರಿ ಕಪಿಲ ಹೇಮಾವತಿ ಲೋಕಪಾವನಿ ತುಂಗಭದ್ರ ದಕ್ಷಿಣವಾಹಿನಿ ಎಂಬ ವ್ಯವಹಾರವು ಹೇಗೆ ಕಲ್ಪಿಸಲ್ಪಟ್ಟಿತೋ, ಕರ ಚರಣ ನೇತ್ರಾದಿಗಳಿಂದ ಏಕವಾಗಿರುವ ಸ್ತ್ರೀಯಲ್ಲಿ ತಾಯಿಗೆ ಮಗಳು, ಅತ್ತೆಗೆ ಸೊಸೆ, ಅಕ್ಕನಿಗೆ ತಂಗಿ, ಮಗಳಿಗೆ ತಾಯಿ, ತಂಗಿಗೆ ಅಕ್ಕ ಎಂಬ ಮೊದಲಾದ ವ್ಯವಹಾರ ಹೇಗೆ ಕಲ್ಪಿಸಲ್ಪಟ್ಟಿತೋ, ಕಾಷ್ಠ ಪಾಷಾಣ ಮೃತ್ತಿಕೆಗಳ ಹೊಂದಿಕೆಗೆ ಮನೆಯೆಂಬ ವ್ಯವಹಾರ ಹೇಗೆ ಕಲ್ಪಿಸಲ್ಪಟ್ಟಿತೋ, ಇಂಥಾ ಮನೆಗಳ ಗುಂಪಿಗೆ ಕಾಶ್ಮೀರ ಅವಂತಿ ಅಯೋಧ್ಯಾ ಪಾಂಚಾಲ ಡಿಲ್ಲಿ ನೇಪಾಳ ಎಂಬ ವ್ಯವಹಾರವು ಹೇಗೆ ಕಲ್ಪಿಸಲ್ಪಟ್ಟಿತೋ ಇದರಂತೆ ಶುಕ್ಲ ಶೋಣಿತ ಮಲ ಮೂತ್ರ ಮೇದೋ ಮಜ್ಜಾಸ್ಥಿಗಳಿಂದ ವ್ಯತ್ಯಾಸವಿಲ್ಲದೆ ಸಮಾನಾಕಾರಮುಳ್ಳ ಮಾಂಸಮಯವಾದ ಪಂಚಭೂತಗಳಿಂದ ಜನಿಸಿದ ಕೆಲವು ಶರೀರಗಳಿಗೆ ಲೋಕವ್ಯವಹಾರಾರ್ಥವಾಗಿ ಕರ್ಮಕಾಂಡದಿಂದ ಬ್ರಾಹ್ಮಣತ್ವಾದಿ ವ್ಯವಹಾರವು ಕಲ್ಪಿಸಲ್ಪಟ್ಟಿತು. ಶಿಖಾ ಯಜ್ಞೋಪವೀತದಿಂದ ವ್ಯತ್ಯಾಸವಿಲ್ಲದೆ ಸಮಾನಾಕಾರಮುಳ್ಳ ಬ್ರಾಹ್ಮಣರಲ್ಲಿ

ಸ್ಮಾರ್ಥ ವೈಷ್ಣವ ರಾಮಾನುಜೀಯರೆಂಬ ವ್ಯವಹಾರವು ಕಲ್ಪಿಸಲ್ಪಟ್ಟಿತು. ಭಸ್ಮ ರುದ್ರಾಕ್ಷಧಾರಣಗಳಿಂದ ವ್ಯತ್ಯಾಸವಿಲ್ಲದೆ ಸಮಾನಾಕಾರವುಳ್ಳ ಸ್ಮಾರ್ತರಲ್ಲಿ ಆಂದ್ರ ಕರ್ನಾಟಕ ದ್ರಾವಿಡರೆಂಬ ವ್ಯವಹಾಹವು ಕಲ್ಪಿಸಲ್ಪಟ್ಟಿತು. ಭಾಷೆಯಿಂದಲೂ ನಡವಳಿಕೆಯಿಂದಲೂ ವ್ಯತ್ಯಾಸವಿಲ್ಲದೆ ಸಮಾನಾಕಾರವುಳ್ಳ ಆಂಧ್ರರಲ್ಲಿ ಮುಲಕ ನಾಡು ವೆಲನಾಡು ತೆಲಘಾಣ್ಯರೆಂಬ ವ್ಯವಹಾರವು ಕಲ್ಪಿತವಾಯಿತು. ಎಲೈ ಶಿಷ್ಯನೇ ! ಆತ್ಮನಿಗೆ ಈ ವ್ಯವಹಾರಗಳು ಯಾವುದೂ ಇಲ್ಲ. ನಿರ್ವಿಕಾರಿಯಾದ ಆತ್ಮನು ಅಜ್ಞಾನದಿಂದ ತನ್ನ ಸ್ವರೂಪವನ್ನು ಮರೆತು ಈ ಕಲ್ಪಿತ ವ್ಯವಹಾರಗಳಲ್ಲಿ ಅಭಿಮಾನಿಸಿ ಜನನ ಮರಣ ದುಃಖಸಮುದ್ರದಲ್ಲಿ ಮುಳಿಗಿದನು. ಆನೆಗೆ ಅಂಕುಶವಂತೆಯೂ, ಕುದುರೆಗಳಿಗೆ ಲಗಾಮಿನಂತೆಯೂ, ಗಿಣಿಗೆ ಪಂಜರದಂತೆಯೂ, ಆತ್ಮಜ್ಞಾನವಿಲ್ಲದೆ ಕಾಮಕ್ರೋಧಾದಿಗಳಿಂದ ಕೂಡಿದ ಪಾಮರರಿಗೋಸ್ಕರ ವರ್ಣಾಶ್ರಮಗಳೆಂಬ ಅಂಕುಶವು ಕಲ್ಪಿಸಲ್ಪಟ್ಟಿತು. ಇಂಥಾ ಪಾಮರರು ತಮ್ಮ ತಮ್ಮ ವರ್ಣಾಶ್ರಮ ಧರ್ಮಕರ್ಮಂಗಳಿಗೆ ಬದ್ಧರಾಗಿ ಆರೀತಿ ನಡೆಯದಿದ್ದರೆ ಅವರಿಗೆ ಕ್ರಿಮಿಕೀಟಾದಿ ಜನ್ಮಗಳು ಪ್ರಾಪ್ತವಾಗುತ್ತೆ. ಆತ್ಮಜ್ಞಾನಿಗಾದರೊ ಅವನ ಚಿತ್ತ ಪರಿಪಕ್ವ ಹೇಗೆಹೇಗೆ ಆಗುತ್ತಾಬರುವುದೋ ಹಾಗೆಲ್ಲಾ ತನ್ನಷ್ಟಕ್ಕೆ ತಾನೇ ಲೋಕಾನುಸಾರವರ್ತನೆಯು ಕಡಿಮೆಯಾಗುತ್ತಾಬರುತ್ತೆ. ಈ ಪ್ರಕಾರ ಅಜ್ಞಾನದಿಂದ ಅವಿವೇಕವೂ, ಅವಿವೇಕದಿಂದ ಅಭಿಮಾನವೂ, ಅಭಿಮಾನದಿಂದ ರಾಗದ್ವೇಷಾದಿಗಳೂ, ರಾಗದ್ವೇಷಾದಿಗಳಿಂದ ಕರ್ಮವೂ, ಕರ್ಮದಿಂದ ಶರೀರವೂ, ಶರೀರದಿಂದ ಜನನಮರಣರೂಪ ಸಂಸಾರದುಃಖವೂ ಉಂಟಾಯಿತು. ಶಿಷ್ಯ— ದುಃಖ ಯಾವಾಗ್ಗೆ ನಾಶವಾಗುತ್ತೆ ? ಶರೀರ ಪರಿಗ್ರಹ ಯಾವಾಗ್ಯೆ ನಾಶವಾಗುತ್ತೆ ? ಗುರು— ಸುತರಾಂ ಕರ್ಮನಾಶವಾದಾಗ್ಯೆ. ಕರ್ಮ ಯಾವಾಗ ನಾಶವಾಗುತ್ತೆ ? ರಾಗದ್ವೇಷಾದಿಗಳು ನಾಶವಾದಾಗ. ರಾಗದ್ವೇಷಾದಿಗಳು ಯಾವಾಗ್ಯೆ ನಾಶವಾಗುತ್ತೆ ? ಅಭಿಮಾನಹೋದಾಗ್ಯೆ. ಅಭಿಮಾನ ಯಾವಾಗ್ಗೆ ಹೋಗುತ್ತೆ ? ಅವಿವೇಕ ನಾಶವಾದ್ಧರೆ. ಅವಿವೇಕ ಯಾವಾಗ್ಯೆ ನಾಶವಾಗುತ್ತೆ ? ಅಜ್ಞಾನ ನಾಶವಾದಾಗ್ಯೆ. ಅಜ್ಞಾನ ಯಾವಾಗ ನಾಶವಾಗುತ್ತೆ ? ಸಮ್ಯಜ್ಞಾನ ಉಂಟಾದಾಗ್ಯೆ. ಸಮ್ಯಜ್ಞಾನ ಯಾವಾಗ ಉಂಟಾಗುತ್ತೆ ? ಸದ್ಗುರು ಕಟಾಕ್ಷ ಒದಗಿದಾಗ್ಯೆ. ಸದ್ಗುರುಕಟಾಕ್ಷ ಯಾವಾಗ್ಯೆ ಒದಗುತ್ತೆ ? ಗುರುಸೇವೆ ಪ್ರಬಲವಾದಾಗ್ಯೆ. ಗುರುಸೇವೆ ಯಾವಾಗ್ಯೆ ಪ್ರಬಲವಾಗುತ್ತೆ ? ಈ ಜನನ ಮರಣ ದುಃಖವನ್ನು ನಾನು ಸಹಿಸಲಾರೆ. ಈ ದುಃಖವು ಎಂದಿಗೆ ತೊಲಗಿ ನಿತ್ಯ ನಿರತಿಶಯಾ

ನಂದವನ್ನು ಪಡೆಯುವೆನೋ ಎಂಬ ತೀವ್ರಾಭಿಲಾಷೆ ನಿನ್ನಲ್ಲಿ ಉಂಟಾದಾಗ್ಯೆ. ಈ ಮೋಕ್ಷವಂ ಪಡೆಯಬೇಕೆಂಬ ಇಚ್ಛೆ ಯಾವಾಗ್ಯೆ ಉಂಟಾಗುತ್ತೆ ? ಅನೇಕಕೋಟಿ ಜನ್ಮಗಳಲ್ಲಿ ನೀನು ಮಾಡಿದ ಈಶ್ವರಾರ್ಪಿತ ಪುಣ್ಯ ಕರ್ಮಗಳೆಲ್ಲಾ ಗುಂಪುಸೇರಿ ಆ ಮಹಾಪುಣ್ಯರಾಶಿಯು ಫಲಿಸಿದಾಗ್ಯೆ. ಈರೀತಿಯಾಗಿ ಶ್ರೀಗುರುವರನು ಪೇಳಿದ ರ್ಥವಂ ಕೇಳಿ ಶಿಷ್ಯನು ಆನಂದಾಶ್ರುಪೂರಿತಲೋಚನನಾಗಿ ಕರಗಳಂ ಮುಗಿದು, ಸ್ವಾಮಿ಼ ಅಜ್ಞಾನವನ್ನು ನಾಶಪಡಿಸುವ ಜ್ಞಾನ ಯಾವುದು ? ಗುರು—ಬ್ರಹ್ಮ ಜ್ಞಾನವು. ಬ್ರಹ್ಮವನ್ನು ತಿಳಿಯತಕ್ಕದ್ದೇ ಬ್ರಹ್ಮಜ್ಞಾನವೆನಿಸುವುದು. ಶಿಷ್ಯ— ಬ್ರಹ್ಮಸ್ವರೂಪವು ಯಾತರಿಂದ ತಿಳಿಯಬೇಕು ? ಗುರು—ವೇದಾಂತ ವಿಚಾರ ದಿಂದ. ಶಿಷ್ಯ—ಕರ್ಮದಿಂದ ತಿಳಿಯುವುದಕ್ಕಾಗುವುದಿಲ್ಲವೆ ?

ಗುರು—ತನ್ನ ಸ್ವರೂಪವನ್ನು ವಿಚಾರದಿಂದಲೇ ತಿಳಿಯಬೇಕು. ಕರ್ಮ ದಿಂದ ತಿಳಿಯುವುದಕ್ಕಾಗುವುದಿಲ್ಲ. ಈ ವಿಷಯ ಪೂರ್ವಭಾಗದಲ್ಲೇ ಹೇಳಿದೆ. ಶಿಷ್ಯ—ಸ್ವಾಮಿ಼ ! ನನ್ನ ಸ್ವರೂಪವೆಂಥಾದ್ದು ? ಇದುವರಿವಿಗೂ ನನ್ನನ್ನು ಹೇಗೆ ತಿಳಿದಿದ್ದೆ ? ಈ ಭವಬಂಧನವು ಏತಕ್ಕೋಸ್ಕರ ಬಂತು ? ಮುಂದೆ ಯಾವರೀತಿ ಭಾವಿಸಬೇಕು ? ಈ ನಾಲ್ಕು ಪ್ರಶ್ನೆಗಳಿಗೆ ಸಮಾಧಾನವನ್ನು ಅಪ್ಪಣೆ ಕೊಡಿಸ ಬೇಕು. ಗುರು—ನೀನು ಕೇಳಿದ ಪ್ರಶ್ನೆಗೆ ಮೊದಲು ದೇಹೇಂದ್ರಿಯ ಕರ್ಮಗ ಳನ್ನು ತಿಳಿಯಬೇಕು. ಆದ್ದರಿಂದ ಅವುಗಳನ್ನು ಹೇಳುತ್ತೇನೆ. ಕಿವಿಯಲ್ಲದೆ ಕಿವಿಗೆ ಬೇರೆಯಾಗಿ ಕಿವಿಯೊಳಗಿರುವ ಬಿಲವನ್ನು ಆಶ್ರಯಿಸಿಕೊಂಡು ಸಕಲ ಶಬ್ದಗಳನ್ನೂ ಗ್ರಹಿಸುವ ಶಕ್ತಿಯುಳ್ಳ ವಸ್ತುವು ಶ್ರೋತ್ರೇಂದ್ರಿಯವೆನಿಸುವುದು. ಚರ್ಮವಲ್ಲದೆ ಚರ್ಮಕ್ಕೆ ಬೇರೆಯಾಗಿ ಚರ್ಮವನ್ನು ಆಶ್ರಯಿಸಿಕೊಂಡು ಶೀತ, ಉಷ್ಣ, ಮೃದು, ಕಠಿನ ಎಂಬುವುದನ್ನ ಗ್ರಹಿಸುವ ಶಕ್ತಿಯುಳ್ಳ ವಸ್ತುವು ಚರ್ಮೇಂದ್ರಿಯವೆನಿಸುವುದು. ಇದಕ್ಕೆ ತ್ವಗಿಂದ್ರಿಯವೆಂತಲೂ ಹೆಸರು. ಕಣ್ಣು ಗುಡ್ಡೆಯಲ್ಲದೆ ಕಣ್ಣುಗುಡ್ಡೆಗೆ ಬೇರೆಯಾಗಿ ಕಣ್ಣುಗುಡ್ಡೆಯನ್ನು ಆಶ್ರಯಿಸಿಕೊಂಡು ರೂಪವನ್ನು ಗ್ರಹಿಸುವ ಶಕ್ತಿಯುಳ್ಳ ವಸ್ತುವು ಚಕ್ಷುರಿಂದ್ರಿಯುವೆನಿಸುವುದು. ನಾಲಿಗೆಯಲ್ಲದೆ ನಾಲಿಗೆಗೆ ಬೇರೆಯಾಗಿ ನಾಲಿಗೆಯ ಕೊನೆಯನ್ನು ಆಶ್ರಯಿಸಿ ಕೊಂಡು ಮಧುರಾದಿ ರಸಗಳನ್ನು ಗ್ರಹಿಸುವ ಶಕ್ತಿಯುಳ್ಳ ವಸ್ತುವು ರಸನೇಂ ದ್ರಿಯವೆನಿಸುವುದು. ಮೂಗಲ್ಲದೆ ಮೂಗಿಗೆ ಬೇರೆಯಾಗಿ ಮೂಗಿನ ಕೊನೆಯನ್ನು ಆಶ್ರಯಿಸಿಕೊಂಡು ಗಂಧವನ್ನು ಗ್ರಹಿಸುವ ಶಕ್ತಿಯುಳ್ಳ ವಸ್ತುವು ಘ್ರಾಣೇಂದ್ರಿಯ ವೆನಿಸುವುದು. ಬಾಯಿಯಲ್ಲದೆ ಬಾಯಿಗೆ ವ್ಯತಿರಿಕ್ತವಾಗಿ ದವಡೆ ಹಲ್ಲುಗಳು

ನಾಲಿಗೆ ಇವುಗಳನ್ನು ಆಶ್ರಯಿಸಿಕೊಂಡು ಮಾತಾಡುವ ಶಕ್ತಿಯುಳ್ಳ ವಸ್ತುವು ವಾಗಿಂದ್ರಿಯವೆನಿಸುವುದು. ಹಸ್ತವಲ್ಲದೆ ಹಸ್ತಕ್ಕೆ ಬೇರೆಯಾಗಿ ಹಸ್ತವನ್ನಾಶ್ರಯಿಸಿಕೊಂಡು ಕೊಡುವುದು ಬಿಡುವುದು ಮೊದಲಾದ ಶಕ್ತಿಯುಳ್ಳ ವಸ್ತುವು ಪಾಣೀಂದ್ರಿಯವೆನಿಸುವುದು. ಕಾಲಲ್ಲದೆ ಕಾಲಿಗೆ ಬೇರೆಯಾಗಿ ಅಂಗಾಲನ್ನು ಆಶ್ರಯಿಸಿಕೊಂಡು ಗಮನಾಗಮನಶಕ್ತಿಯುಳ್ಳ ವಸ್ತುವು ಪಾದೇಂದ್ರಿಯವೆನಿಸುವುದು. ಗುದವಲ್ಲದ ಗುದಕ್ಕೆ ಬೇರೆಯಾಗಿ ಗುದರಂಧ್ರವನ್ನಾಶ್ರಯಿಸಿಕೊಂಡು ಮಲವಿಸರ್ಜನ ಬಂದನಮಾಡುವ ಶಕ್ತಿಯುಳ್ಳ ವಸ್ತುವು ಗುದೇಂದ್ರಿಯವೆನಿಸುವುಮ. ಗುಹ್ಯವಲ್ಲದೆ ಗುಹ್ಯಕ್ಕೆ ಬೇರೆಯಾಗಿ ಗುಹ್ಯವನ್ನು ಆಶ್ರಯಿಸಿಕೊಂಡು ಕಾಮವಿಕಾರವನ್ನುಂಟುಮಾಡುವ ಶಕ್ತಿಯುಳ್ಳ ವಸ್ತುವಿಗೆ ಉಪಸ್ಥೇಂದ್ರಿಯವೆಂದು ಹೆಸರು. ಇದನ್ನು ಕೇಳಿ ಶಿಷ್ಯನು ಸ್ವಾಮಿ ! ಈಗ ತಾವು ಹೇಳಿದ ವಿಷಯದಲ್ಲಿ ನನಗೆ ಸಂದೇಹವುಂಟಾಗಿದೆ. ಹೇಗೆಂದರೆ—ಶ್ರೋತ್ರ, ಚರ್ಮ, ಕಣ್ಣು, ನಾಲಿಗೆ ಮುಂತಾದವುಗಳನ್ನೇ ಆಯಾಯ ಇಂದ್ರಿಯಗಳೆಂದು ಏತಕ್ಕೆ ಹೇಳಕೂಡದು ? ಇವುಗಳಲ್ಲದೆ ಬೇರೆಯಾಗಿ ಇವುಗಳನ್ನಾಶ್ರಯಿಸಿಕೊಂಡಿರುವ ವಸ್ತುಗಳು ಆಯಾಯ ಇಂದ್ರಿಯಗಳೆಂದು ಏತಕ್ಕೆ ಹೇಳಬೇಕು ? ಇದಕ್ಕೆ ಸಮಾಧಾನ ಹೇಳಬೇಕು. ಗುರು—ಪುತ್ರನೇ ! ಈರೀತಿಯಾಗಿ ನಿನಗೆ ತೋರತಕ್ಕ ಸಂಶಯಗಳನ್ನೆಲ್ಲಾ ಕೇಳಿದರೇನೆ ನಿಶ್ಚಯಜ್ಞಾನ ಉಂಟಾಗತಕ್ಕದ್ದು. ಆದರೆ ನಿನ್ನ ಆಕ್ಷೇಪಕ್ಕೆ ಸಮಾಧಾನವಂ ಕೇಳು. ಕಿವುಡರಿಗೆ ಕಿವಿಯಿದ್ದಾಗ್ಯೂ ಶ್ರೋತ್ರೇಂದ್ರಿಯವಿಲ್ಲದ್ದರಿಂದ ಶಬ್ದ ಕೇಳುವುದಿಲ್ಲ. ಚರ್ಮೇಂದ್ರಿಯ ಕೆಟ್ಟಿರತಕ್ಕವರಿಗೆ ಚರ್ಮವಿದ್ದಾಗ್ಯೂ ಶೀತೋಷ್ಣಸ್ಪರ್ಶಗಳು ಗೊತ್ತಾಗುವುದಿಲ್ಲ. ಕುರುಡರಿಗೆ ಕಣ್ಣುಗುಡ್ಡೆಯಿದ್ದಾಗ್ಯೂ ಚಕ್ಷುರಿಂದ್ರಿಯವಿಲ್ಲದಕಾರಣ ರೂಪು ಕಾಣುವುದಿಲ್ಲ. ರಸನೇಂದ್ರಿಯ ನಷ್ಟವಾದವರಿಗೆ ನಾಲಿಗೆಯಿದ್ದಾಗ್ಯೂ ರುಚಿ ತೋರುವುದಿಲ್ಲ. ಘ್ರಾಣೇಂದ್ರಿಯ ಕೆಟ್ಟವರಿಗೆ ಮೂಗು ಇದ್ದಾಗ್ಯೂ ಸುಗಂಧ ದುರ್ಗಂಧ ತೋರುವುದಿಲ್ಲ. ಮೂಗರಿಗೆ ನಾಲಿಗೆ ತುಟಿ ಹಲ್ಲು ದವಡೆ ಬಾಯಿದ್ದಾಗ್ಯೂ ವಾಗಿಂದ್ರಿಯವಿಲ್ಲದಕಾರಣ ಮಾತಾಡುವುದಿಲ್ಲ. ಶಳವು ಬಂದವರಿಗೆ ಕೈಯಿದ್ದಾಗ್ಯೂ ಪಾಣೀಂದ್ರಿಯವಿಲ್ಲದಕಾರಣ ತತ್ಕರ್ಮ ನಡೆಯುವುದಿಲ್ಲ. ಹೆಳವರಿಗೆ ಕಾಲಿದ್ದಾಗ್ಯೂ ಪಾದೇಂದ್ರಿಯವಿಲ್ಲದಕಾರಣ ಗಮನಕ್ಕವಕಾಶವಿಲ್ಲ. ಗುದೇಂದ್ರಿಯ ನಷ್ಟವಾಗಿದ್ದವರಿಗೆ ಗುದದ್ವಾರವಿದ್ದಾಗ್ಯೂ ಮಲವಿಮೋಚನೆ ಸರಿಯಾಗಿ ಆಗುವುದಿಲ್ಲ. ನಪುಂಸಕರಿಗೆ ಗುಹ್ಯವಿದ್ದಾಗ್ಯೂ ಉಪಸ್ಥೇಂದ್ರಿಯವಿಲ್ಲದಕಾರಣ ಕಾಮೋದ್ರೇಕ

ವಾಗುವುದಿಲ್ಲ. ಆದ್ದರಿಂದ ಇಂದ್ರಿಯಗಳೇ ಬೇರೆ. ಗೋಳಕಗಳೇ ಬೇರೆ. ಇಂದ್ರಿಯಗಳಲ್ಲೆಲ್ಲಾ ಲಿಂಗದೇಹದ್ದು. ಗೋಳಕಗಳೆಲ್ಲಾ ಸ್ಥೂಲದೇಹದ್ದು. ಇಂದ್ರಿಯಗಳು ಲಿಂಗದೇಹದ್ದು, ಗೋಳಕಗಳು ಸ್ಥೂಲದೇಹದ್ದು ಎಂಬ ವಿಷಯ ದಲ್ಲಿ ಒಂದು ಅನುಭವವನ್ನು ಹೇಳುತ್ತೇನೆ. ಕುರುಡನು ಸ್ವಪ್ನದಲ್ಲಿ ಪದಾರ್ಥ ಗಳನ್ನು ನೋಡುತ್ತಾನೆ. ಕಿವುಡನು ಸ್ವಪ್ನದಲ್ಲಿ ಶಬ್ದವನ್ನು ಕೇಳುತ್ತಾನೆ. ಈರೀತಿ ಯಾಗಿ ಬಾಹ್ಯದಲ್ಲಿ ಯಾವ ಇಂದ್ರಿಯವಿಲ್ಲವೋ ಆ ಇಂದ್ರಿಯವ್ಯಾಪಾರವು ಸ್ವಪ್ನ ದಲ್ಲಿ ನಡೆಯುತ್ತೆ. ಸ್ವಪ್ನದಲ್ಲಿ ಲಿಂಗದೇಹವಿರೋಣದರಿಂದ ಇಂದ್ರಿಯಗಳು ಲಿಂಗದೇಹದ್ದೆಂಬುವುದೇ ಸತ್ಯ. ಎಲೈ ಶಿಷ್ಯನೇ: ಶಬ್ದವನ್ನು ಕೇಳುವುದು ಶ್ರೋತ್ರೇಂ ದ್ರಿಯ ಧರ್ಮ. ಸ್ಪರ್ಶವನ್ನು ಸೋಕುವುದು ಚರ್ಮೇಂದ್ರಿಯ ಧರ್ಮ. ರೂಪ ವನ್ನು ನೋಡುವುದು ನೇತ್ರೇಂದಿಯ ಧರ್ಮ. ರುಚಿನೋಡುವುದು ಜಿಹ್ವೇಂದ್ರಿಯ ಧರ್ಮ. ವಾಸನೆ ನೋಡುವುದು ಘ್ರಾಣೇಂದ್ರಿಯ ಧರ್ಮ. ಈ ಪಂಚಜ್ಞಾ ನೇಂದ್ರಿಯಗಳ ಧರ್ಮವೂ ಸಚ್ಚಿದಾನಂದಸ್ವರೂಪನಾದ ನಿನ್ನಲ್ಲಿಲ್ಲ. ಮಾತಾಡುವ ಪುರಾಣ ಪಠನ ಪಾರಾಯಣಾದಿಗಳೆಲ್ಲಾ ವಾಗಿಂದ್ರಿಯಧರ್ಮ. ಕೊಡುವುದು ತೆಗೆದುಕೊಳ್ಳುವುದು ಪಾಣೀಂದ್ರಿಯಧರ್ಮ. ಸಂಚರಿಸುವುದು ಪಾದೇಂದ್ರಿಯ ಧರ್ಮ. ಮಲವಿಸರ್ಜನಾದಿಗಳಿಗೆ ಅವಕಾಶವನ್ನು ಕೊಡುವುದು ಗುದೇಂದ್ರಿಯ ಧರ್ಮ. ಕಾಮೋದ್ರೇಕವನ್ನುಂಟುಮಾಡಿ ನಾರೀಸುಖವನ್ನು ಬಯಸಿ ಕರಣಗಳಿಗೆ ಆನಂದವನ್ನುಂಟುಮಾಡುವುದು ಉಪಸ್ಥೇಂದ್ರಿಯಧರ್ಮ. ಈ ಪಂಚಕರ್ಮೇಂದ್ರಿ ಯಗಳ ಧರ್ಮವು ಸಚ್ಚಿದಾನಂದಸ್ವರೂಪನಾದ ನಿನಗಲ್ಲ. ಹೃದಯದಲ್ಲಿದ್ದು ಕೊಂಡು ಜಠರಾಗ್ನಿಯಂ ಪ್ರಜ್ವಲಿಸುತ್ತಾ ಉಚ್ಛ್ವಾಸ ನಿಶ್ವಾಸಗಳಂ ಮಾಡುವುದು ಪ್ರಾಣವಾಯುವಿನ ಧರ್ಮ. ಗುದಸ್ಥಾನವನ್ನಾಶ್ರಯಿಸಿ ಗುದೇಂದ್ರಿಯಕ್ಕೆ ಬಲವಂ ಕೊಟ್ಟು ಮಲಮೂತ್ರಗಳನ್ನು ಹೊರಕ್ಕೆ ನೂಕತಕ್ಕದ್ದು ಅಪಾನವಾಯುವಿನ ಧರ್ಮ. ನಾಭಿಯನ್ನಾಶ್ರಯಿಸಿ ಅನ್ನರಸವನ್ನು ಅವಯವಗಳಿಗೆ ವ್ಯಾಪಿಸುವಂತೆ ಮಾಡು ವುದು ಸಮಾನವಾಯುವಿನ ಧರ್ಮ. ಕಂಠದಲ್ಲಿದ್ದು ಶೀನು ಬಿಕ್ಕಳಿಕೆ ವಮನಾದಿ ಕರ್ಮಗಳನ್ನು ಮಾಡಿಸುವುದು ಉದಾನವಾಯುವಿನಧರ್ಮ. ದೇಹವನ್ನೆಲ್ಲಾ ವ್ಯಾಪಿಸಿ ಕೊಂಡು ಎಲ್ಲಾ ನಾಡಿಗಳಿಗೂ ಬಲವನ್ನು ಕೊಡತಕ್ಕದ್ದು ವ್ಯಾನವಾಯುವಿನ ಧರ್ಮ. ಈ ಪಂಚವಾಯುಗಳ ಧರ್ಮವು ಸಚ್ಚಿದಾನಂದ ಸ್ವರೂಪನಾದ ನಿನ್ನಲ್ಲಿಲ್ಲ. ಸಮಸ್ತ ಪದಾರ್ಥಗಳನ್ನೂ ಅಪೇಕ್ಷಿಸುವುದು ಮತ್ತು ಸಂಕಲ್ಪಕ ಕಾಮಕ್ರೋಧಾ ದಿಗಳೆಲ್ಲಾ ಮನಸ್ಸಿನ ಧರ್ಮ. ಇದು ಹೀಗೆ ಸರಿಯೆಂದು ನಿಶ್ಚಯಿಸುವುದು

ಬುದ್ಧಿಯ ಧರ್ಮ. ಬಹು ದಿನದಲ್ಲಿ ನಡೆದ ಸಂಗತಿಯನ್ನು ಸ್ಮರಿಸುವುದು ಚಿತ್ತದ ಧರ್ಮ. ನಾನು ಉತ್ತಮನು, ನನ್ನ ಸಮಾನರು ಯಾರು, ನನ್ನದು ಎಂದು ಅಭಿಮಾನಿಸುವುದು ಅಹಂಕಾರ ಧರ್ಮ. ಈ ಅಂತಃಕರಣ ಚತುಷ್ಟಯ ಧರ್ಮಗಳು ಆತ್ಮನಿಗಲ್ಲ. ಶಿಷ್ಯ—ಸ್ವಾಮಿನ್! ಶಬ್ದವನ್ನು ಕೇಳುವುದು ಮೊದಲುಮಾಡಿಕೊಂಡು ಅಭಿಮಾನಿಸುವುದೇ ಕಡೆಯಾದ ಈ ಹೇಳಿದ ಕರ್ಮಗಳೆಲ್ಲಾ ಕರಣೇಂದ್ರಿಯಗಳಿಗೆ ವಿನಹ ಆತ್ಮನಿಗಿಲ್ಲವೆಂದು ಹೇಳಿದ್ದು ಶಾಸ್ತ್ರಸಮ್ಮತವಾಯಿತು. ಇದಕ್ಕೆ ಅನುಭವ ಹೇಗೆ ? ಗುರು—ಸೂರ್ಯನಿದ್ದಕಡೆ ಅವನ ಸ್ವರೂಪವಾದ ಬೆಳಕು ಇರುವಂತೆ ಇಂದ್ರಿಯಗಳಿರುವ ಕಡೆ ಅದರ ಧರ್ಮಗಳೂ ಇರುತ್ತವೆ. ಸುಷುಪ್ತಿಯಲ್ಲಿ ನೀನು ಇದ್ದಾಗ್ಯೂ ಶ್ರೋತ್ರಾದಿ ಜ್ಞಾನೇಂದ್ರಿಯಗಳಿಲ್ಲದ ಕಾರಣ ಶಬ್ದವಂ ಕೇಳುವವರಿಲ್ಲ. ಸ್ಪರ್ಶವಂ ಸೋಕುವುದಿಲ್ಲ. ರೂಪವಂ ನೋಡವುದಿಲ್ಲ. ರಸವಂ ರುಚಿಸುವುದಿಲ್ಲ. ಗಂಧವಂ ಮೂಸುವುದಿಲ್ಲ. ಮತ್ತು ವಾಗಾದಿ ಕರ್ಮೇಂದ್ರಿಯಗಳಿಲ್ಲವಾಗಿ ನುಡಿಯುವುದಿಲ್ಲ, ಕೊಡುವುದಿಲ್ಲ, ನಡೆಯುವುದಿಲ್ಲ, ಮಲವಿಸರ್ಜನವಿಲ್ಲ, ಸ್ತ್ರೀ ಬಯಕೆ ಇಲ್ಲ, ಮತ್ತು ಮಾನಸಾದ್ಯಂತಃಕರಣಗಳಿಲ್ಲವಾಗಿ ಸಂಕಲ್ಪ ವಿಕಲ್ಪ ಕಾಮಕ್ರೋಧಾದಿಗಳಿಲ್ಲ, ನಿಶ್ಚಯಿಸುವುದಿಲ್ಲ, ಸ್ಮರಿಸುವುದಿಲ್ಲ, ಅಭಿಮಾನಿಸುವುದಿಲ್ಲ ; ನೀನು ಮಾತ್ರ ಇರೋಣದರಿಂದ ನಿನ್ನ ಸ್ವರೂಪವಾದ ಆನಂದ ಮಾತ್ರ ಇದೆ. ಜಾಗ್ರತ್ಸ್ವಪ್ನಗಳಲ್ಲಿ ಸಕಲೇಂದ್ರಿಯ ಕರಣಗಳಿರೋಣದರಿಂದ ಅವುಗಳ ವ್ಯಾಪಾರವುಂಟಾಗುತ್ತೆ. ಆದ್ದರಿಂದ ಸಕಲ ವ್ಯಾಪಾರವೂ ಆಯಾಯ ಇಂದ್ರಿಯ ಕರಣಾದಿಗಳದೇ ವಿನಹ ಸಚ್ಚಿದಾನಂದ ಸ್ವರೂಪನಾದ ನಿನ್ನಲ್ಲಿಲ್ಲ. ಶಿಷ್ಯ—ಲೋಕದಲ್ಲಿ ಚೇತನಕ್ಕೆ ಶಕ್ತಿಯಿದೆಯೇ ಹೊರ್ತು ಅಚೇತನಕ್ಕಿಲ್ಲ. ಇಂಥಾದ್ದರಲ್ಲಿ ಜಡಗಳಾದ ಶ್ರೋತ್ರಾದಿಗಳಿಗೆ ಶಬ್ದಗ್ರಹಣಾದಿ ಶಕ್ತಿಯು ಎಲ್ಲಿ ಬಂತು ? ಗುರು—ಕಮಲಗಳು ಜಡವಾದಾಗ್ಯೂ ಸೂರ್ಯನ ಸನ್ನಿಧಾನಬಲದಿಂದ ಅರಳುತ್ತವೆ, ನೈದಿಲೆಯು ಮುಕುಳಿತವಾಗುತ್ತೆ. ಘೃತ, ಮೇಣ ಇವುಗಳು ಜಡಗಳಾದಾಗ್ಯೂ ಕರಗುತ್ತವೆ. ಜೇಡಿಮಣ್ಣು ಜಡವಾದಾಗ್ಯೂ ಬಿಗಿದುಕೊಳ್ಳುತ್ತೆ. ಸೂರ್ಯಕಾಂತಶಿಲೆಯು ಜಡವಾದಾಗ್ಯೂ ಅಗ್ನಿಯೊಡನೆ ಕೂಡಿ ಸಮೀಪದಲ್ಲಿನ ಪದಾರ್ಥಗಳನ್ನು ದಹಿಸುತ್ತೆ. ಸೂಜಿಗಳು ಜಡವಾದಾಗ್ಯೂ ಸೂಜಿಗಲ್ಲಿನ ಸನ್ನಿಧಾನಬಲದಿಂದ ಹೇಗೆ ಚಲಿಸುತ್ತವೋ ಅದರಂತೆ ಇಂದ್ರಿಯಾದಿಗಳು ಜಡಗಳಾದಾಗ್ಯೂ ಪರಮಾತ್ಮನಾದ ನಿನ್ನಸನ್ನಿಧಾನಬಲದಿಂದ ಆಯಾಯ ಕಾರ್ಯಗಳನ್ನು

ಮಾಡುವುವು. ಸೂರ್ಯೋದಯವಾಗಲು ಸೂರ್ಯಸನ್ನಿಧಿಯ ಬಲದಿಂದ ಸ್ನಾನಾದಿ ಕರ್ಮಗಳನ್ನು ಮಾಡುವುದು ಬ್ರಾಹ್ಮಣಧರ್ಮ. ಕೃಷ್ಯಾದಿಗಳು ಶೂದ್ರ ಧರ್ಮ. ಸಂಚರಿಸುವುದು ವಾಯಸಾದಿ ಪಕ್ಷಿಮೃಗಾದಿಗಳ ಧರ್ಮ. ಮಲಗುವುದು ಗೂಬೆಗಳ ಧರ್ಮ. ದುಃಖಿಸುವುದು ಜಾರ ಚೋರರ ಧರ್ಮ. ಅರಳುವುದು ಕಮಲದ ಧರ್ಮ. ಮುಗಿಯುವುದು ನೈದಿಲೆಯ ಧರ್ಮ. ಬಲಿಯುವುದು ಮಣ್ಣಿನ ಧರ್ಮ. ಸಂತೋಷಿಸುವುದು ಚಕ್ರವಾಕದ ಧರ್ಮ. ಈ ಕರ್ಮಗಳಿಗೆಲ್ಲಾ ಸೂರ್ಯನು ಸಾಕ್ಷಿಯಾಗಿ ಈ ಕರ್ಮಗಳನ್ನು ಹೊಂದದೆ ಹೇಗಿದ್ದಾನೋ ಮತ್ತು ಈ ಕರ್ಮಗಳೆಲ್ಲಾ ಸೂರ್ಯನನ್ನು ಹೇಗೆ ಸ್ಪರ್ಶಿಸುವುದಿಲ್ಲವೊ ಅದರಂತೆ ಸಚ್ಚಿದಾನಂದ ಸ್ವರೂಪನಾದ ನಿನ್ನ ಸನ್ನಿಧಾನದಿಂದ ಕರಣೇಂದ್ರಿಯಗಳು ತಮ್ಮ ತಮ್ಮ ಕರ್ಮಗಳನ್ನು ಮಾಡಲು ಈ ಕರ್ಮಗಳಿಗೆ ಸಾಕ್ಷಿಯಾದ ನೀನು ಈ ಕರ್ಮಗಳನ್ನು ಹೊಂದುವುದಿಲ್ಲ, ಮತ್ತು ಈ ಕರಣಾದಿಗಳ ಧರ್ಮಗಳು ನಿನ್ನನ್ನು ಸ್ಪರ್ಶಿಸಲಾರವು. ಆವಕಾರಣ ನೀನು ಸಚ್ಚಿದಾನಂದ ಸ್ವರೂಪನು. ಶಿಷ್ಯ—ಸ್ವಾಮಿ ! ಸಚ್ಚಿದಾನಂದಗಳೆಂದರೇನು ? ಇವುಗಳ ಸ್ವರೂಪವನ್ನು ಚೆನ್ನಾಗಿ ತಿಳಿಸಬೇಕು. ಗುರು—ಸತ್ ಚಿತ್ ಆನಂದ ಇವು ಬ್ರಹ್ಮನ ಸ್ವರೂಪ. ಭೂತ ಭವಿಷ್ಯತ್ತು ವರ್ತಮಾನಗಳೆಂಬ ಕಾಲತ್ರಯದಲ್ಲೂ ಭೂತವೆಂದರೆ ಹಿಂದೆ ಕಳೆದ ಕಾಲ. ಭವಿಷ್ಯತ್ ಅಂದರೆ ಮುಂದೆ ಬರುವ ಕಾಲ. ವರ್ತಮಾನವೆಂದರೆ ಈಗ ನಡೆಯುವ ಕಾಲ. ಈ ಕಾಲತ್ರಯದಲ್ಲೂ, ಜಾಗ್ರತ್ ಸ್ವಪ್ನಸುಷುಪ್ತಿಗಳೆಂಬ ಅವಸ್ಥಾತ್ರಯದಲ್ಲೂ, ಬಾಲ್ಯ ಯೌವನ ವಾರ್ಧಿಕ್ಯಗಳಲ್ಲೂ ನಾಶವನ್ನು ಹೊಂದದೆ ಸ್ಥಿರವಾಗಿ ಏಕಾಕಾರದಿಂದಿರುವುದೇ ಸದ್ರೂಪವೆನಿಸುವುದು. ಮತ್ತೊಂದು ಪ್ರಕಾಶದಿಂದ ತೋರ್ಪಡಿಸಿಕೊಳ್ಳದೆ ತಾನೇ ತೋರುತ್ತಾ ಇತರ ವಸ್ತುಗಳನ್ನು ಬೆಳಗಿಸುವುದೇ ಚಿದ್ರೂಪವೆನಿಸುವುದು. ಎಲ್ಲಕ್ಕಿಂತಲೂ ಅತಿಶಯವಾದ ಪ್ರೀತಿಗೆ ಆಸ್ಪದವಾಗಿರುವುದೇ ಆನಂದ ಸ್ವರೂಪವೆನಿಸುವುದು. ಶಿಷ್ಯ—ಈ ಸಚ್ಚಿದಾನಂದಗಳು ಜೀವನಾದ ನನ್ನಲ್ಲಿ ಇದೆಯೋ ? ಗುರು—ಇರೋಣದರಿಂದಲೇನೇ ನೀನು ಬ್ರಹ್ಮನೆಂದು ಶ್ರುತಿಗಳು ಹೇಳುವುದು. ಶಿಷ್ಯ—ಶ್ರುತಿಯ ಮಾತಂತಿರಲಿ ; ನಮ್ಮಂಥಾ ಮೂಢರಿಗೆ ಅನುಭವವಾದಹೊರ್ತು ನಂಬಿಕೆ ತೋರುವುದಿಲ್ಲವಾದ್ದರಿಂದ ಅನುಭವದಲ್ಲಿ ತೋರಿಸಿ. ಗುರು—ಈ ಕೆಳಗೆ ನಾನು ಕೇಳತಕ್ಕದ್ದಕ್ಕೆಲ್ಲಾ ಉತ್ತರವನ್ನು ಹೇಳು. ನೀನು ಈಗ ಇದ್ದೀಯೋ ಇಲ್ಲವೊ ? ಇದ್ದೇನೆ, ಶರೀರದಿಂದ ಕೂಡಿದ್ದೇನೆ. ಈ ಶರೀರ ಏತರಿಂದ ಬಂತು ? ಕರ್ಮದಿಂದ. ಈ ಜನ್ಮದಲ್ಲಿ

ಮಾಡಿದ ಕರ್ಮದಿಂದಲೊ ? ಪೂರ್ವಜನ್ಮದಲ್ಲಿ ಮಾಡಿದ ಕರ್ಮದಿಂದಲೋ ? ಪೂರ್ವ ಜನ್ಮದಲ್ಲಿ ಮಾಡಿದ ಕರ್ಮದಿಂದ. ಹಾಗಾದರೆ ನೀನು ಪೂರ್ವಜನ್ಮದಲ್ಲಿ ಇದ್ದೆಯೋ ಇರಲಿಲ್ಲವೋ ? ಇದ್ದೆ. ಶರೀರದಿಂದ ಕೂಡಿದ್ದೆಯೋ ಶರೀರವಿಲ್ಲದೆ ಇದ್ದೆಯೋ? ಶರೀರದಿಂದ ಕೂಡಿದ್ದೆ. ಆ ಶರೀರವು ಯಾತರಿಂದ ಬಂತು ? ಆಚೆ ಜನ್ಮದಲ್ಲಿ ಮಾಡಿದ ಕರ್ಮದಿಂದ. ಆ ಜನ್ಮದ ಶರೀರವ್ಯಾತರಿಂದ ಬಂತು ? ಅದರಾಚೆ ಜನ್ಮದಲ್ಲಿ ಮಾಡಿದ ಕರ್ಮದಿಂದ. ಈ ರೀತಿ ಎಷ್ಟು ಜನ್ಮಗಳಿಂದ ನೀನು ಇರುತ್ತೀಯೆ? ಅನೇಕ ಕೊಟಿ ಜನ್ಮಗಳಿಂದ ಅದನ್ನು ಗಣಿಸುವುದಕ್ಕೆ ಆಗುವುದೇ ಇಲ್ಲ. ಇದುವರಿಗೆ ನಿನಿಗೆ ಬಂದ ದೇಹಗಳೆಲ್ಲ ಏನಾದವು? ನಾಶವಾದವು. ನೀನೋ ? ನಾನು ಸ್ಥಿರವಾಗಿ ಎಂದಿಗೂ ಕೆಡದೆ ಇದ್ದೇನೆ. ಎಲೈ ಶಿಷ್ಯನೇ ! ಈ ಅನುಭವದಿಂದ ನೀನು ಭೂತಕಾಲವಲ್ಲಿರುತ್ತೀಯೆ. ಈಗ ನೀನು ಇರೋಣದ ರಿಂದ ವರ್ತಮಾನ ಕಾಲದಲ್ಲೂ ಇರುತ್ತೀಯೆ. ಇದರಂತೆ ಮುಂದಣ ಜನ್ಮದಲ್ಲಿ ನೀನಿರುತ್ತಿಯೋ ಇಲ್ಲವೊ ? ಇರುತ್ತೇನೆ. ಏತಕ್ಕೋಸ್ಕರ ಇರುತ್ತೀಯೆ ? ಈ ಜನ್ಮದಲ್ಲಿ ಮಾಡಿದ ಕರ್ಮಫಲವನ್ನು ಅನುಭವಿಸುವದಕ್ಕೋಸ್ಕರ. ಆಚೇ ಜನ್ಮ ದಲ್ಲೋ? ಆ ಜನ್ಮದಲ್ಲೂ ಇರುತ್ತೇನೆ. ಏತಕ್ಕೊಸ್ಕರ ? ಅದರ ಹಿಂದಣ ಜನ್ಮದ ಕರ್ಮಫಲವನ್ನು ಅನುಭವಿಸುವುದಕ್ಕೊಸ್ಕರ. ಈ ರೀತಿ ಎಲ್ಲಿಯವರಿವಿಗೂ ಇರುತ್ತೀಯೆ ? ಇದುವರಿವಿಗೂ ಎಂದು ಹೇಗೆ ಹೇಳಬಹುದು ; ಯಾವಾಗ್ಯೂ ಇದ್ದೇ ಇರುತ್ತೇನೆಂದು ಹೇಳಬೇಕು. ಈ ಅನುಭವದಿಂದ ನೀನು ಭೂತಭವಿಷ್ಯತ್ ವರ್ತಮಾನಗಳೆಂಬ ಕಾಲತ್ರಯದಲ್ಲೂ ಇರುತ್ತೀಯೆ. ಮತ್ತು ಜಾಗ್ರದವಸ್ಥೆ ಯಲ್ಲಿ ಸ್ವಪ್ನಸುಷುಪ್ತಿಗಳಿಲ್ಲ. ನೀನು ಇರುತ್ತೀಯೆ, ಸ್ವಪ್ನದಲ್ಲಿ ಜಾಗ್ರತು ಸುಷುಪ್ತಿಗಳಿಲ್ಲ. ಜಾಗ್ರತ್ ಸುಷುಪ್ತಿಗಳಲ್ಲಿ ನೀನು ಇರುತ್ತೀಯೆ. ಸುಷುಪ್ತಿಯಲ್ಲಿ ಜಾಗ್ರತ್ಸ್ವಪ್ನಗಳಿಲ್ಲ. ಜಾಗ್ರತ್ಸ್ವಪ್ನಗಳಲ್ಲಿರುವ ನೀನು ಇರುತ್ತೀಯೆ. ಈ ರೀತಿ ಅವಸ್ಥೆಗಳು ಒಂದರಲ್ಲೊಂದಿಲ್ಲದೆ ನಾಶವಾದಾಗ್ಯೂ ಅವಸ್ಥಾತ್ರಯದಲ್ಲು ನಾಶ ವಾಗದೇ ನೀನಿರುತ್ತೀಯೆ. ಇದರಂತೆ ಬಾಲ್ಯಾವಸ್ಥೆಯಲ್ಲಿ ಯೌವನ ವಾರ್ಧಿಕ್ಯ ಗಳಿಲ್ಲ. ಯೌವನ ವಾರ್ಧಿಕ್ಯಗಳಲ್ಲಿರುವ ನೀನು ಇದ್ದೀಯೆ. ಯೌವನದಲ್ಲಿ ಬಾಲ್ಯ ವಾರ್ಧಿಕ್ಯಗಳಿಲ್ಲ. ಬಾಲ್ಯ ವಾರ್ಧಿಕ್ಯಗಳಲ್ಲಿರುವ ನೀನು ಇದ್ದೀಯೆ. ವಾರ್ಧಿಕ್ಯದಲ್ಲಿ ಬಾಲ್ಯ ಯೌವನಗಳಿಲ್ಲ. ಬಾಲ್ಯ ಯೌವನಗಳಲ್ಲಿರುವ ನೀನು ಇದ್ದಿಯೆ. ಈ ರೀತಿ ಬಾಲ್ಯಾದಿಗಳು ಒಂದರಲ್ಲಿ ಒಂದಿಲ್ಲದೆ ನಾಶವಾದಾಗ್ಯೂ ನೀನು ನಾಶ ವಾಗದೆ ಇವುಗಳಲ್ಲೆಲ್ಲಾ ಇದ್ದೀಯೆ. ಆದ್ದರಿಂದ ನಿನ್ನಲ್ಲಿ ಸದ್ರೂಪತ್ವವು

ಹೇಗೆಂದರೆ:—ನೀನು ಕತ್ತಲೆಯಲ್ಲಿ ಮಲಗಿಕೊಂಡು ತುಂಬಾ ಮುಸುಕು ಹಾಕಿಕೊಂಡು ಕಣ್ಣುಗಳನ್ನು ಮುಚ್ಚಿಕೊಂಡು ಇರುವ ಕಾಲದಲ್ಲಿ ಹಗಲು ನೀನು ನೋಡಿದ ವಿಚಿತ್ರಗಳನ್ನು ಎಲ್ಲಾ ಕಾರ್ಯಗಳನ್ನು ನೋಡುತ್ತೀಯೆ. ಅದನ್ನೆಲ್ಲಾ ನೋಡುವ ವಿಷಯದಲ್ಲಿ ಇತರ ಪ್ರಕಾಶ ವಸ್ತುವು ಯವವುದೂ ಇಲ್ಲದೆ ನಿನ್ನ ಪ್ರಕಾಶವೇ ಇತ್ತು. ಆದ್ದರಿಂದ ನೀನು ಜ್ಯೋತಿಸ್ವರೂಪನು. ಇದಲ್ಲದೆ ಸ್ವಪ್ನದಲ್ಲಿ ನಾನಾ ಪದಾರ್ಥಗಳನ್ನೆಲ್ಲಾ ನೋಡುತ್ತೀಯೆ. ಸ್ವಪ್ನದಲ್ಲಿನ ವಸ್ತುಗಳನ್ನು ನೋಡತಕ್ಕ ವಿಷಯದಲ್ಲಿ ಸೂರ್ಯನ ಬೆಳಕಿಲ್ಲ, ಚಂದ್ರನ ಬೆಳಕಿಲ್ಲ, ದೀಪವಿಲ್ಲ, ನೋಡತಕ್ಕದ್ದಕ್ಕೆ ಕಣ್ಣುಗಳೂ ಇಲ್ಲ. ಪ್ರಕಾಶಪಡಿಸತಕ್ಕ ವಸ್ತುಗಳು ಯಾವುದೂ ಇಲ್ಲದೇ ಇದ್ದಾಗ್ಯೂ ಸ್ವಪ್ನದ ಪದಾರ್ಥಗಳು ನಿನ್ನ ಬೆಳಕಿನಿಂದ ಪ್ರಕಾಶಿಸುತ್ತವೆ. ಆದ್ದರಿಂದ ನಿನ್ನಲ್ಲಿ ಚಿದ್ರೂಪತ್ವ ಸಿದ್ಧಿಸಿತು.

ಇನ್ನು ಆನಂದಸ್ವರೂಪತ್ವ ಹೇಗೆಂದರೆ—ಲೋಕದಲ್ಲಿರುವ ಪ್ರೀತಿಕರವಾದ ಪದಾರ್ಥಗಳಿಗಿಂತಲೂ ನೀನೇ ಅತ್ಯಂತ ಪ್ರಿಯನಾಗಿರೋಣದರಿಂದ ನೀನು ಆನಂದಸ್ವರೂಪನು. ಅದು ಹೇಗೆಂದರೆ—ಪತ್ನಿ ಪುತ್ರ ಧನ ಧಾನ್ಯಾದಿಗಳೊಡನೆ ನೀನು ಮನೆಯಲ್ಲಿ ಮಲಗಿರಲು, ರಾತ್ರೆ ಮನೆಯಸುತ್ತ ಬೆಂಕಿ ಬಿದ್ದರೆ ಪತ್ನೀ ಪುತ್ರ ಧನಧ್ಯಾದಿಗಳನ್ನೆಲ್ಲಾ ಬಿಟ್ಟು ನಾನು ಉಳಕೊಂಡರೆ ಸಾಕೆಂದು ಈಚೆಗೆ ಬರುತ್ತೀಯೆ. ಆದ್ದರಿಂದ ಎಲ್ಲಕ್ಕಿಂತಲೂ ಪ್ರೀತಿಗೆ ಆಸ್ಪದನಾದವನು ನೀನೇ ಆಗಿರುತ್ತೀಯೆ. ಲೋಕದಲ್ಲಿ ಸಕಲ ಸಂಸಾರವೂ ತನಗೋಸ್ಕರವಲ್ಲದೆ ಇತರರಿಗೋಸ್ಕರ ಅಲ್ಲ. ಹೇಗೆಂದರೆ—ಒಬ್ಬ ಮನುಷ್ಯನು ಸತ್ತರೆ ತಂದೆಯು ವಾರ್ಧಿಕ್ಯದಲ್ಲಿ ನನಗ್ಯಾರೂ ದಿಕ್ಕಿಲ್ಲದಂತಾಯಿತಲ್ಲಾ ಎಂದು ತನಗೋಸ್ಕರ ದುಃಖಿಸುತ್ತಾನೆ. ಪತ್ನಿಯು ತಾನು ವಿಧವೆಯಾದೆನೆಂದು ತನಗೋಸ್ಕರ ದುಃಖಿಸುತ್ತಾಳೆ. ಪುತ್ರನು ತಾನು ಅನಾಥನಾದೆನೆಂದು ತನಗೋಸ್ಕರ ದುಃಖಿಸುತ್ತಾನೆ. ಈ ರೀತಿ ಸರ್ವರೂ ತಮ್ಮ ತಮ್ಮ ಕಾರ್ಯನಾಶಕ್ಕೋಸ್ಕರ ದುಃಖಿಸುವರೇ ವಿನಹ ಸತ್ತವರಿಗೆ ಯಾರೂ ದುಃಖಿಸುವುದಿಲ್ಲ. ಯಾವ ಕೆಲಸಕ್ಕೂ ಉಪಯೋಗಿಸದೇ ಅತಿ ಮುದಕನಾಗಿ ಪರರಿಗೆ ಹಿಂಸೆಯನ್ನುಂಟುಮಾಡುವ ಮನುಷ್ಯನನ್ನು ನೋಡಿ ಇವನು ಸಾಯಬಾರದೇ ಎಂದು ಎಲ್ಲರೂ ಕೋರುತ್ತಾರೆ. ಏಕೆಂದರೆ—ಇವನಿಂದ ಇತರರಿಗೆ ಯಾವ ಪ್ರಯೋಜನವೂ ಇಲ್ಲದ ಕಾರಣ ಸಾವನ್ನು ಬಯಸುತ್ತಾರೆ. ಲೋಕದಲ್ಲಿ ಎಲ್ಲಕ್ಕಿಂತಲೂ ತಮಗೆ ತಾವೇ ಪ್ರಿಯರಾಗಿರುತ್ತಾರೆ. ಆದ್ದರಿಂದ ಆತನು ಆನಂವ

ಸ್ವರೂಪನಾಗಿರುತ್ತಾನೆ. ಆದರೆ ಬ್ರಹ್ಮಾನಂದವು ಈಗ ಏತಕ್ಕೆ ತೋರುವುದಿಲ್ಲ. ಅಂದರೆ—ಹತ್ತು ಹುಡುಗರ ಜೊತೆಯಲ್ಲಿ ಓದುತ್ತಿರುವ ತನ್ನ ಮಗನ ಧ್ವನಿಯು ಸ್ಪಷ್ಟವಾಗಿ ಹೇಗೆ ತಿಳಿಯುವುದಿಲ್ಲವೊ, ಹಾಗೆ ತನ್ನ ಆನಂದಸ್ವರೂಪವು ವ್ಯಕ್ತವಾಗುವುದಿಲ್ಲ. ತನ್ನ ಪುತ್ರನ ಧ್ವನಿಯು ಕೇಳದೇ ಇರುವುದಕ್ಕೆ ಬಹು ಜನಗಳ ಶಬ್ದವೇ ಪ್ರತಿಬಂಧಕವು. ಇಲ್ಲಿ ತನ್ನ ಆನಂದವೂ ವ್ಯಕ್ತವಾಗುವುದಕ್ಕೆ ಅವಿದ್ಯೆಯು ಅದರ ಕಾರ್ಯವಾದ ದೇಹೇಂದ್ರಿಯಾದಿಗಳೇ ಪ್ರತಿಬಂಧಕವು. ಯಾವಾಗ್ಗೆ ಅವಿದ್ಯೆಯು ಅವಿದ್ಯಾಕಾರ್ಯಮಾದ ದೇಹೇಂದ್ರಿಯಾದಿಗಳು ನಾಶವಾಗುತ್ತೋ ಆವಾಗ್ಯೆ ತನ್ನ ಆನಂದವೂ ವ್ಯಕ್ತಪಡುತ್ತೆ. ಆದ್ದರಿಂದ ನಿನ್ನಲ್ಲಿ ಆನಂದತ್ವವಿರುತ್ತೆ. ಈ ರೀತಿ ಶ್ರುತಿ ಯುಕ್ತಿ ಅನುಭವಗಳಿಂದ ನಿನ್ನ ಸ್ವರೂಪವನ್ನು ತಿಳಿದು ದೇಹೇಂದ್ರಿಯಕರಣ ಧರ್ಮ ಕರ್ಮಗಳಿಗೆ ಸಿಲುಕದ ಸಚ್ಚಿದಾನಂದ ಸ್ವರೂಪನಾದ ಆ ಪರಮಾತ್ಮನೇ ನಾನೆಂದು ದೃಢತರವಾಗಿ ತಿಳಿದರೆ ನೀನು ಮುಕ್ತನಾಗುವಿ. ಇದುವರಿವಿಗೆ ನೀನು ಕರಣೇಂದ್ರಿಯ ಧರ್ಮಗಳನ್ನು ನಿನ್ನಲ್ಲಿ ಆರೋಪಿಸಿಕೊಂಡು ನಾನು ಕರ್ತನು, ಭೋಕ್ತನೆಂದು ತಿಳಿದು ಜನನ ಮರಣ ದುಃಖಕ್ಕೆ ಬದ್ಧನಾಗಿದ್ದೆ. ಈಗ ಈ ಕರ್ತೃತ್ವಾದಿಗಳಂ ಬಿಟ್ಟು ಬ್ರಹ್ಮನಾಗು. ನಿನಗೆ ಸಂಶಯ ಅಸಂಭಾವನೆ ವಿಪರೀತಭಾವನೆ ಇವು ಮೂರು ಸುತರಾಂ ನಾಶವಾಗುವವರಿಗೂ ದೃಢಜ್ಞಾನ ಉಂಟಾಗಲಾರದು. ಆ ಭಾವನಾತ್ರಯ ಯಾವುದೆಂದೊಡೆ ನಾನು ಬ್ರಹ್ಮನು ಹೌದೋ ಅಲ್ಲವೋ ಎಂಬುವುದೇ ಸಂಶಯ. ನಾನು ಬ್ರಹ್ಮನಾದರೆ ನನ್ನಲ್ಲಿ ಸರ್ವಜ್ಞತ್ವ ಮಹಾ ಶಕ್ತಿಗಳೂ ಇರಬೇಕು. ಅವಿಲ್ಲವಾದ್ದರಿಂದ ನಾನು ಬ್ರಹ್ಮನಲ್ಲವೆಂಬುವುದೇ ಅಸಂಭಾವನೆ. ನಾನು ಬ್ರಹ್ಮನಾದಲ್ಲಿ ನಾನು ಕರ್ಮ ಮಾಡಬೇಕು, ಹೀಗಿರಬೇಕು ಎಂದು ನನ್ನನ್ನು ಕುರಿತು ಕರ್ಮಕಾಂಡವು ಹೇಳುತ್ತಿರಲಿಲ್ಲ. ನನಗೆ ಪೂರ್ವೋಕ್ತರೀತ್ಯಾ ಶಾಸ್ತ್ರವು ಆಜ್ಞೆಮಾಡುತ್ತಾಗಿ ನಾನು ಜೀವನೇ ಸರಿಯೆಂದು ತಿಳಿಯುವುದೇ ವಿಪರೀತಭಾವನೆ. ಈ ಸಂಶಯತ್ರಯವು ಸುತರಾಂ ನಾಶವಾದ ಹೊರತು ಎಂದಿಗೂ ಮುಕ್ತಿಯಿಲ್ಲ. ಇವುಗಳು ನಾಶವಾಗಬೇಕಾದರೆ (ಶ್ರವಣ, ಮನನ, ನಿಧಿಧ್ಯಾಸನ) ಇವುಗಳನ್ನು ಮಾಡಬೇಕು. ಶ್ರವಣವೆಂದರೆ ವೇದಾರ್ಥವನ್ನು ವಿಚಾರಮಾಡುವುದು ಮತ್ತು ಕೇಳುವುದು. ಮನನವೆಂದರೆ ಕೇಳಿದ ಅರ್ಥವನ್ನು ಯುಕ್ತಿಯಿಂದ ದೃಢಪಡಿಸುವುದು. ನಿಧಿದ್ಯಾಸನವೆಂದರೆ ದೃಢಪಟ್ಟ ವಸ್ತುವಿನಲ್ಲಿ ಮನಸ್ಸನ್ನು ನಿಲ್ಲಿಸುವುದು. ಈ ಮೂರ

ರಿಂದ ಮೇಲೆ ಹೇಳಿದ ಭಾವನಾತ್ರಯವು ನಾಶವಾಗುತ್ತೆ. ಆದ್ದರಿಂದ ಜ್ಞಾನೋತ್ಪತ್ತಿಗೆ ಶ್ರವಣಾದಿಗಳೇ ಮುಖ್ಯ ಸಾಧನಗಳು. ಆತ್ಮಜ್ಞಾನವನ್ನು ಪಡೆಯಬೇಕೆಂದು ಅಪೇಕ್ಷಿಸುವನು ಭೇದವನ್ನು ಹೇಳುವ ಪುರಾಣಾದಿಗಳನ್ನು ಎಂದಿಗೂ ಕೇಳಕೂಡದು. ವೇದಾಂತ ಗ್ರಂಥಗಳನ್ನೇ ಸರ್ವದಾ ಕೇಳಬೇಕು. ಅದ್ವೈತ ಗ್ರಂಥಗಳಲ್ಲೂ ಅನೇಕವುಂಟು. ಅವುಗಳಲ್ಲಿ ಮಹಾ ಪಂಡಿತರಾಗಿಯೂ ಸ್ವಾನುಭವವುಳ್ಳವರಾಗಿಯೂ ಇರುವ ಮಹನೀಯರು ಮಾಡಿರುವ ಗ್ರಂಥಗಳನ್ನೇ ನೋಡಬೇಕು. ಸಾಧಾರಣ ಗ್ರಂಥಗಳನ್ನು ನೋಡಿದರೆ ಸಂಶಯ ನಾಶವಾಗಲಾರದು. ಸಂಸ್ಕೃತದಲ್ಲೂ ಪ್ರಾಕೃತದಲ್ಲೂ ಅನೇಕ ವೇದಾಂತ ಗ್ರಂಥಗಳುಉಂಟು. ಅವುಗಳಲ್ಲಿ ಶಂಕರಾಚಾರ್ಯಕೃತ ಸೂತ್ರಭಾಷ್ಯ, ಪಂಚದಶಿ, ಚಿತ್ಸುಖೀ, ಅದ್ವೈತಸಿದ್ಧಿ, ಬ್ರಂಹ್ಮಾನಂದೀಯಾದಿ ಗ್ರಂಥಗಳು ಸರ್ವೋತ್ತಮವಾದವು. ಪ್ರಾಕೃತಭಾಷೆಯಲ್ಲಿ ಅನೇಕ ಗ್ರಂಥಗಳಿದ್ದಾಗ್ಯೂ ಅವುಗಳಲ್ಲಿ ಸಾಧು ನಿಶ್ಚಲದಾಸರಿಂದ ವಿರಚಿತವಾದ ವಿಚಾರಸಾಗರ, ವೃತ್ತಿಪ್ರಭಾಕರವೆಂಬ ಗ್ರಂಥಗಳು, ನಿಜಗುಣ ಶಿವಯೋಗೀಂದ್ರ ವಿರಚಿತ ವಿವೇಕಚಿಂತಾಮಣಿ ಮೊದಲಾದ ಗ್ರಂಥಗಳೇ ವೇದಕ್ಕೂ ಸೂತ್ರಭಾಷ್ಯಾದಿ ಮಹಾಗ್ರಂಥಗಳಿಗೂ ವ್ಯತ್ಯಾಸವಿಲ್ಲದೆ ಮುಮುಕ್ಷುಗಳಿಗೆ ಸ್ವಾನುಭವವನ್ನುಂಟುಮಾಡುವ ಗ್ರಂಥಗಳಾಗಿರುತ್ತವೆ. ಈ ಗ್ರಂಥಗಳನ್ನು ಸಮಗ್ರವಾಗಿ ಓದಿದವರಿಗೇನೆ ಸಂಶಯ ನಾಶವಾಗಿ ಸಮ್ಯಜ್ಞಾನ ಉಂಟಾಗತಕ್ಕದ್ದು. ಕೆಲವರು ಈ ಗ್ರಂಥಗಳನ್ನು ಅರ್ಥಮಾಡಿಕೊಳ್ಳುವುದಕ್ಕಾಗದೆ ಸಾಧಾರಣ ಗ್ರಂಥಗಳನ್ನು ಓದುತ್ತಾರೆ. ಆದ್ದರಿಂದ ಸಂಶಯ ಬೇರೆ ನಾಶವಾಗಲಾರದು. ಜ್ಞಾನಸಿಂಧುವು ಕೆಲವು ಭಾಗ ಸಮನಾಗಿದ್ದಾಗ್ಯೂ ಕೆಲವು ಭಾಗದಲ್ಲಿ ಅನುಭವಕ್ಕೂ ಶ್ರುತಿಸಿದ್ಧಾಂತಗಳಿಗೂ ವಿರುದ್ಧವಾಗಿದೆ. ಆ ವಿರುದ್ಧಾಂಶವಾವುದೆಂದರೆ—ಪಂಚಭೂತಗಳ ಉತ್ಪತ್ತಿಯನ್ನು ಹೇಳುವುದರಲ್ಲಿ ಈಶ್ವರನ ಪಂಚಮುಖಗಳಿಂದ ಪಂಚಭೂತಗಳು ಹುಟ್ಟಿದವೆಂದು ಹೇಳಿದೆ. ಇದು ಶಾಸ್ತ್ರಕ್ಕೂ ಅನುಭವಕ್ಕೂ ವಿರುದ್ಧ. ಹೇಗೆಂದರೆ—ವೇದಾಂತ ಗ್ರಂಥದಲ್ಲೂ,

ಶ್ರುತಿಯಲ್ಲೂ ಆತ್ಮನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ತೇಜಸ್ಸು, ತೇಜಸ್ಸಿನಿಂದ ಜಲ, ಜಲದಿಂದ ಭೂಮಿ ಹುಟ್ಟಿತೆಂದು ಹೇಳಿದೆ. ಇಂಥಾ ವಿರುದ್ಧಾಂಶಗಳನೇಕವಿರುತ್ತಾಗಿ ಮುಮುಕ್ಷುಗಳು ಸಿದ್ಧಾಂತ ಗ್ರಂಥಗಳನ್ನೇ ಓದಿ ಸಂಶಯಗಳನ್ನು ಕಳೆದುಕೊಂಡು ಬ್ರಹ್ಮಾನಂದವನ್ನು ಹೊಂದಬೇಕೆಂದು ಹೇಳಿದ ಗುರುವಾಕ್ಯವಂ ಕೇಳಿ ಶಿಷ್ಯನು ಪರಮಾನಂದಭರಿತನಾದನು.

**ಇದು ಕಣಾ ದುರ್ವಾದಿನೀವಿಲಾಸ ।**
**ಬುಧಪಟಲ ಜಂಝೂಸಮೀರಣ ।**
**ವಿದು ಸಕಲ ಸಂದೇಹ ಘೋರಾರಣ್ಯ ದಾವಾಗ್ನಿ ॥**
**ಇದು ನಿಖಿಲ ನಿಗಮಾಂತದುಗ್ಧಾಂ ।**
**ಬುಧಿ ಜನಿತ ಪೀಯೂಷ ಸಾಗರವು ।**
**ಬುಧರಿದನೆ ಬಿಡದೋದಿ ಪಡೆವುದು ನಿತ್ಯ ಸೌಖ್ಯವನು ॥**

ಇತಿ ಶ್ರೀ ಶಿವಾನಂದಾಪರನಾಮಕ ಶಿವರಾಮಕೃತ
**ಮುಕ್ತಿಮಾರ್ಗ ಪ್ರದೀಪಿಕಾ ಸಮಾಪ್ತಾ.**



## ಪ್ರ ಕ ಟ ನೆ.

| | | |
|---|---|---|
| ಅರೇಬಿಯನ್ ನೈಟ್ಸ್ ೧೫೭೨ ಪುಟಗಳುಳ್ಳದ್ದು ದೊಡ್ಡದು ೧-೨ನೇ ಭಾಗ | ೧೦ | ೦ |
| (ಅರೇಬಿಯನ್ ಡೇಸ್) ಪಾರಶಿಯ ಹಗಲಿನ ವಿನೋದ ಕಥೆಗಳು | ೩ | ೦ |
| ಶಂಕರಸಂಹಿತೆ ಎಂಬ ಸ್ಕಾಂದಮಹಾಪುರಾಣ ದೊಡ್ಡದು | ೫ | ೦ |
| ಬೃಹಜ್ಜಾತಖಾಕ್ಯಹೋರಾಶಾಸ್ತ್ರ ೧೨೦೦ ಪುಟಗಳು | ೧೦ | ೦ |
| ಟೀಕಾ ಜೈಮಿನಿಭಾರತ ೯೩೦ ಪುಟ ದೊಡ್ಡಸೈಜು | ೧೨ | ೦ |
| ಶಬ್ದೌಘ ಕಲ್ಪದೃಮವೆಂಬ ಸಂಸ್ಕೃತ ಕನ್ನಡ ನಿಘಂಟು | ೬ | ೦ |
| ಕನ್ನಡ ಮಹಾಭಾಗವತ ಪದ್ಯರೂಪ ದ್ವಾದಶಸ್ಕಂದಗಳು | ೧೫ | ೦ |
| ಕನ್ನಡ ದಶಪರ್ವ ಭಾರತ ಹೊಸ ಮುದ್ರಣ ಪದ್ಯರೂಪ | ೮ | ೦ |
| ಕನ್ನಡ ಅಷ್ಟಪರ್ವಭಾರತ ಹೊಸಮುದ್ರಣ ಶುದ್ಧಪ್ರತಿ ಪದ್ಯರೂಪ | ೪ | ೦ |
| ಕನ್ನಡ ಮಹಾಭಾರತ ೧೮ ಪರ್ವಗಳು ಶುದ್ಧಪ್ರತಿ ಹೊಸ ಮುದ್ರಣ ಪದ್ಯರೂಪ | ೧೨ | ೦ |
| ಶ್ರೀ ಮಹಾಭಕ್ತವಿಜಯ ೧೫೫ ಭಕ್ತರ ಕಥೆಗಳು ದೊಡ್ಡದು | ೧೦ | ೦ |
| ಸಚಿತ್ರ ಭಟ್ಟವಿಕ್ರಮಾದಿತ್ಯರಾಯನ ಕಥೆ ೩ ಭಾಗಗಳು | ೫ | ೦ |
| ಕನ್ನಡ ತೊರವೆರಾಮಾಯಣ ಪದ್ಯರೂಪ | ೫ | ೦ |
| ವಚನರಾಮಾಯಣ ದಶಾವತಾರಗಳ ಸಹಿತ | ೩ | ೦ |
| ವಚನ ಭಾಗವತ ಕಥಾಸಂಗ್ರಹ | ೪ | ೦ |
| ಜೈಮಿನಿ ಭಾರತ ಪದ್ಯರೂಪ ಶುದ್ಧಪ್ರತಿ | ೨ | ೮ |
| ಚನ್ನ ಬಸವೇಶ್ವರಪುರಾಣ ಶುದ್ಧಪ್ರತಿ | ೨ | ೮ |
| ವಿದ್ಯಾಮಂಜರಿ ಕಥೆಗಳು | ೪ | ೦ |
| ವಚನ ಜ್ಞಾನಸಿಂಧು ದೊಡ್ಡದು ಹೊಸಮುದ್ರಣ | ೫ | ೦ |
| ಸಟೀಕಾ ಅನುಭವಾಮೃತ | ೨ | ೦ |
| ವಿಷ್ಣುಸಹಸ್ರನಾಮ, ರಾಮಸಹಸ್ರನಾಮ, ಅಷ್ಟೋತ್ತರಗಳು | ೧ | ೦ |
| ಸುಂದರಕಾಂಡ ಶ್ಲೋಕ, ಪ್ರತಿಪದ ಟೀಕಾ ತಾತ್ಪರ್ಯ | ೧೦ | ೦ |
| ವೇದಾಂತ ಪಂಚದಶಿ, ಶ್ಲೋಕ ಪ್ರತಿಪದ ಟೀಕಾ ತಾತ್ಪರ್ಯ | ೮ | ೦ |
| ಸ್ವತಃ ಇಂಗ್ಲೀಷ್ ಕಲಿಯುವ ಸಚಿತ್ರ ಆಂಗ್ಲಭಾಷಾ ಪ್ರಕಾಶಿಕೆ ೧, ೨ ಮತ್ತು ೩ ಭಾಗಗಳುಳ್ಳದ್ದು | ೪ | ೮ |



**ಮತ್ತೂ ನಮ್ಮಲ್ಲಿ ವೈದ್ಯ, ವೇದಾಂತ, ಜೋತಿಷ್ಯ, ನಾಟಕ, ಯಕ್ಷಗಾನ ಪುರಾಣ ಗ್ರಂಥಗಳು, ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಸದಾ ಬಿಕರಿಗೆ ಸಿದ್ಧವಾಗಿರುತ್ತೆ.**

**ಟಿ. ಯನ್. ಕೃಷ್ಣಯ್ಯಶೆಟ್ಟಿ,**

**ಬುಕ್‌ಡಿಪೊ, ಚಿಕ್ಕಪೇಟೆ, ಬೆಂಗಳೂರು ಸಿಟಿ.**

---

ಮುದ್ರಕರು:—ಗೀತಾ ಪವರ್ ಪ್ರೆಸ್, ಪಾರ್ಕ್‌ರೋಡ್, ಬೆಂಗಳೂರು ಸಿಟಿ.